# ಹೊಸ ಮನುಷ್ಯ

ಸಮಾಜವಾದಿ ಮಾಸಿಕ

ಏಪ್ರಿಲ್, ೨೦೧೬ ಸಂಪಾದಕ : ಡಿ.ಎಸ್.ನಾಗಭೂಷಣ ಸಂಪುಟ: ೫ ಸಂಚಿಕೆ: ೯

**ಚಂದಾ :** ರೂ. ೧೫೦/-(ಮಾರ್ಚ್-ಆಗಸ್ಟ್, ೨೦೧೬) ಬಿಡಿ ಪ್ರತಿ: ರೂ. ೨೦/- ಪುಟ: ೨೦

**ವಿಳಾಸ:** ಎಚ್.ಐ.ಜಿ-೫, 'ನುಡಿ', ಕಲ್ಲಳ್ಳಿ ಬಡಾವಣೆ, ವಿನೋಬ ನಗರ, ಶಿವಮೊಗ್ಗ-೫೭೭ ೨೦೪

**ದೂ:** ೦೮೧೮೨-೨೪೮೫೭೪ **ಸಂಚಾರಿ:** ೯೪೪೯೨ ೪೨೨೮೪ ***ಈ ಮೇಲ್:*** dsnagabhushana@gmail.com

## ಸಂಪಾದಕರ ಟಿಪ್ಪಣಿಗಳು

ಪ್ರಿಯ ಓದುಗರೇ,

ಐದು ರಾಜ್ಯಗಳ ವಿಧಾನಸಭಾ ಚುನಾವಣೆಗಳು ಹತ್ತಿರ ಬರುತ್ತಿದ್ದಂತೆ ರಾಷ್ಟ್ರದ ರಾಜಕಾರಣ ಕಾವೇರುತ್ತಿದೆ. ಮೋದಿಯವರು ಪ್ರಧಾನಿ ಆದ ಮೇಲೆ ಈ ಕಾವು ಸದಾ ಇದ್ದೇ ಇದೆಯಾದರೂ ಈಗ ಚುನಾವಣೆಗಳು ಘೋಷಣೆಯಾಗಿರುವ ಐದು ರಾಜ್ಯಗಳಲ್ಲಿ-ಕೇರಳ, ತಮಿಳ್ನಾಡು, ಪುದುಚೇರಿ, ಪ.ಬಂಗಾಲ ಮತ್ತು ಅಸ್ಸಾಂ- ಬಿಜೆಪಿಯ ಬಲ ನಗಣ್ಯವಾಗಿರುವ ಹಿನ್ನೆಲೆಯಲ್ಲಿ ಕಾವು ವಿಶೇಷ ತೀವ್ರತೆ ಪಡೆಯುತ್ತಿದೆ. ಆ ಪಕ್ಷ ನಿಜವಾದ ಅರ್ಥದಲ್ಲಿ-ಒಟ್ಟು ಬಲದಲ್ಲಿ ಮಾತ್ರವಲ್ಲದೆ ಭೌಗಳಿಕವಾಗಿಯೂ-ಅಖಿಲ ಭಾರತ ಸ್ವರೂಪವನ್ನು ಪಡೆಯುವ ಹವಣಿಕೆಯಲ್ಲಿದೆ. ಹಾಗಾಗಿಯೇ ಅದು ಬಲ್ಲವರ ಮತ್ತು ಹಿರಿಯರ ಯಾವ ಮಾತುಗಳನ್ನೂ ಕಿವಿಗೆ ಹಾಕಿಕೊಳ್ಳದೆ 'ರಾಷ್ಟ್ರೀಯತೆ'ಯ ಚರ್ಚೆಯನ್ನು ಒಂದು ವಿವಾದವಾಗಿಯೇ ಜೀವಂತವಿಡುವ ಹಠ ತೊಟ್ಟಂತೆ ಕಾಣುತ್ತದೆ. ಈಗಲೂ, ಯಾವ ವಿಶ್ವಾಸಾರ್ಹ ಸಾಕ್ಷ್ಯವೂ ಇಲ್ಲದೆ ಜೆಎನ್‌ಯುನಲ್ಲಿ ವಿದ್ಯಾರ್ಥಿಗಳು ರಾಷ್ಟ್ರವಿರೋಧಿ ಘೋಷಣೆಗಳನ್ನು ಕೂಗಿದರು ಎಂದು ವಾದಿಸುತ್ತಲೇ ಇದೆ. ಅಂತಹ ಘೋಷಣೆಗಳನ್ನು ಕೂಗಿದವರೆಂದು ಹೇಳಲಾಗುವ ಮುಸುಕುಧಾರಿಗಳನ್ನು ಗುರುತಿಸಲಾಗಿದೆ ಎಂದು ಅದು ಹೇಳುತ್ತಿದೆಯಾದರೂ, ಅವರ ಹಿನ್ನೆಲೆಗಳನ್ನು ಮಾತ್ರ ಬಹಿರಂಗಪಡಿಸುತ್ತಿಲ್ಲ, ಏಕೆ?

ಇದೆಲ್ಲದರ ಜೊತೆಗೆ ಈಗ 'ಭಾರತ್ ಮಾತಾಕಿ ಜೈ' ಘೋಷಣೆಯ ಸುತ್ತ ಒಂದು ವಿವಾದ ಸೃಷ್ಟಿಸಿರುವ ಸಂಘ ಪರಿವಾರವು, ತನ್ನ ನಿರ್ದೇಶನದ ಮೇರೆಗೆ ಆ ಘೋಷಣೆಯನ್ನು ಕೂಗದಿರುವುದನ್ನು ರಾಷ್ಟ್ರವಿರೋಧಿ ಎಂದು ಕರೆದು ಮಾಧ್ಯಮಗಳಲ್ಲಿ ರಂಪ ಎಬ್ಬಿಸಿದೆ. ರಾಷ್ಟ್ರದ ಜನ ಯಾರ ನಿರ್ದೇಶನವೂ ಇಲ್ಲದೆ, ಅಗತ್ಯ ಸಂದರ್ಭಗಳಲ್ಲಿ ಈ ಘೋಷಣೆಯನ್ನು ಕೂಗುತ್ತಲೇ ಬಂದಿದ್ದಾರೆ. ಆದರೆ ಗುರಿಯಿಟ್ಟು ಕೆಲ ಮುಸ್ಲಿಂ ಶಾಸಕರ ಬಾಯಿಂದ ಈ ಘೋಷಣೆ ಕೂಗಿಸಲು ಯತ್ನಿಸಿ ಅದನ್ನು ಅವರ ರಾಷ್ಟ್ರೀಯತೆಯ ಅಗ್ನಿ ಪರೀಕ್ಷೆ ಎಂಬಂತೆ ಬಿಂಬಿಸಿ ತನ್ನ ಚುನಾವಣಾ ಆಟವನ್ನು ಶುರುವಿಟ್ಟುಕೊಂಡಿದೆ. ಕಾಂಗ್ರೆಸ್ ಕೂಡ ಈ ಅಪಾಯಕಾರಿ ಆಟದಲ್ಲಿ ಬಿಜೆಪಿಯೊಂದಿಗೆ ಸೇರಿಕೊಂಡಿರುವುದು ಇಂದು ಅದರ ನೈತಿಕ ಸ್ಥೈರ್ಯ ಎಷ್ಟು ಕುಗ್ಗಿಹೋಗಿದೆ ಎಂಬುದರ ಸೂಚನೆಯಾಗಿದೆ. ಇನ್ನು ಆ ಕೆಲ ಮುಸ್ಲಿಂ ಶಾಸಕರೋ ಶುದ್ಧ ಮೂರ್ಖರಂತೆ ವರ್ತಿಸುತ್ತಾ, ಸಂಘ ಪರಿವಾರವೆಂಬುದು ಮೂಡುವ ಮುನ್ನವೇ ಹುಟ್ಟಿದ ಈ ಘೋಷಣೆಯ ವಾರಸುದಾರಿಕೆಯನ್ನು ಅದಕ್ಕೆ ನೀಡಿ, ಈ ತಮ್ಮ ಇತಿಹಾಸದ ಅಜ್ಞಾನದ ಆಧಾರದ ಮೇಲೆ ಆ ಘೋಷಣೆಯನ್ನು ಕೂಗಲು ನಿರಾಕರಿಸುತ್ತಿದ್ದಾರೆ. ಇದರಿಂದಾಗಿ ಎಂದೂ ವಿವಾದಾಸ್ಪದವಾಗದಿದ್ದ ನಮ್ಮ ರಾಷ್ಟ್ರೀಯತೆ ಎಂಬುದು ಇಂದು ಮಾಧ್ಯಮಗಳಲ್ಲಿ ದೊಡ್ಡ ವಿವಾದದ ವಿಷಯವಾಗಿ ಪರಿಣಮಿಸಿ ಬಿಡುವಿಲ್ಲದ ಜನರ ಮಧ್ಯೆ ಎಲ್ಲ ರೀತಿಯ ಸುಲಭದ ಚರ್ಚೆಯ ವಸ್ತುವಾಗಿದೆ.

ಸಂಘ ಪರಿವಾರಕ್ಕೆ ಬೇಕಾದುದೂ ಇದೇ. ಮಿಕ್ಕ ಪಕ್ಷಗಳಿಗೆ ಹೋಲಿಸಿದರೆ ಬದ್ಧ ಕಾರ್ಯಕರ್ತರ ಒಂದು ಅಸಾಧಾರಾಣ ಮತ್ತು ಸಂಕೀರ್ಣ ಜಾಲವನ್ನು ಹೊಂದಿರುವ ಅದು ಇಂತಹ ಚರ್ಚೆಯನ್ನು ತನ್ನ ಪರವಾಗಿ ತಿರುಗಿಸಿಕೊಳ್ಳಬಲ್ಲುದಾಗಿದೆ. ಜೆಎನ್‌ಯು ವಿದ್ಯಾರ್ಥಿ ನಾಯಕ ಕನ್ನಯ್ಯಕುಮಾರ್‌ಗೆ ದೆಹಲಿ ಶ್ರೇಷ್ಠ ನ್ಯಾಯಾಲಯದ ಮಹಿಳಾ ನ್ಯಾಯಮೂರ್ತಿಯೊಬ್ಬರು ಷರತ್ತುಬದ್ಧ ಜಾಮೀನು ನೀಡಿದ ತೀರ್ಪಿಗೆ ಹಳೇ ಹಿಂದಿ ಸಿನಿಮಾವೊಂದರ ಜನಪ್ರಿಯ ದೇಶಪ್ರೇಮ ಗೀತೆಯೊಂದು ಸ್ಫೂರ್ತಿಯಾದದ್ದರ ಬಗ್ಗೆ ನಮ್ಮ ಮಾಧ್ಯಮಗಳು ವ್ಯಾಪಕವಾಗಿ ಚರ್ಚಿಸಿದ್ದೂ ಇದೇ ಹಿನ್ನೆಲೆಯಲ್ಲೇ. ವಿಜಯ ಮಲ್ಯನಂತಹ ತಿಮಿಂಗಿಲ ದೇಶಬಿಟ್ಟು ಹೋಗಲು ಅವಕಾಶ ನೀಡಿದ್ದು ರಾಷ್ಟ್ರವಿರೋಧಿಯಾಗದೆ ಒಂದು ಘೋಷಣೆ ಕೂಗದಿರುವುದು ರಾಷ್ಟ್ರವಿರೋಧಿ ಕೃತ್ಯವಾಗಿ ಬಿಂಬಿತವಾಗುವಂತೆ ಮಾಡುತ್ತಿರುವ ಇಂದಿನ ಒಟ್ಟಾರೆ ರಾಜಕೀಯ ಪರಿಸ್ಥಿತಿಯೇ ಜಿಗುಪ್ಸೆ ತರುವಂತಿದೆ.

ಅದೇನೇ ಇರಲಿ, ಇಂದು ಮಾಧ್ಯಮಗಳು ತಮ್ಮ ೨೪ X ೭ ಚರ್ಚೆಗಳಿಗೆ ವಸ್ತುಗಳ ಕೊರತೆಯನ್ನೆದುರಿಸುತ್ತಾ ಕನ್ನಯ್ಯಕುಮಾರ್‌ನನ್ನು ಓರ್ವ ರಾಷ್ಟ್ರೀಯ ಹೀರೋನನ್ನಾಗಿ ಮಾಡಹೊರಟಿರುವುದು ತಮಾಷೆಯಾಗಿ ಕಾಣುತ್ತಿದೆ. ಮಾಧ್ಯಮಗಳ ಸುದ್ದಿ ಹಸಿವನ್ನು ನೀಗಿಸುವಂತಹ 'ಬೇಡಿಕೆ'ಗಳಿಗೆ ಸೊಪ್ಪುಹಾಕದ ಎನ್.ಡಿ.ಎ. ಸರ್ಕಾರದ ವಿರುದ್ಧ ಸೇಡು ತೀರಿಸಿಕೊಳ್ಳಲೋ ಎಂಬಂತೆ ಈ ಮಾಧ್ಯಮಗಳು ಈ ಕನ್ನಯ್ಯಕುಮಾರ್‌ನನ್ನು ಸರ್ಕಾರದ ವಿರುದ್ಧದ ತನ್ನ ದನಿಯನ್ನಾಗಿ ಮಾಡಿಕೊಳ್ಳಲೆತ್ನಿಸುತ್ತಿರುವಂತಿದೆ. ಮಾತಿನಲ್ಲಿ ರಾಹುಲ್ ಗಾಂಧಿಯವರಿಗಿಂತ ಹೆಚ್ಚು ಪರಿಣಾಮಕಾರಿಯಾಗಿರುವಂತೆ ತೋರುವ ಈ ಯುವಕ ಪಡೆಯುತ್ತಿರುವ ಮಹತ್ವ ನಮ್ಮ ಎಲ್ಲ ವಿರೋಧ ಪಕ್ಷಗಳ ನಾಯಕತ್ವಗಳೂ ಮುಟ್ಟಿರುವ ಅಧೋಗತಿಯನ್ನು ಸೂಚಿಸುತ್ತಿರುವಂತಿದೆ. ಅಷ್ಟೇ ಅಲ್ಲ, ಇದು ರಾಷ್ಟ್ರೀಯವೆಂದು ಕರೆದುಕೊಳ್ಳುವ ನಮ್ಮ ವಿದ್ಯುನ್ಮಾನ ಮಾಧ್ಯಮಗಳ ಬೌದ್ಧಿಕ ಅಧೋಗತಿಯ ಸೂಚನೆಯೂ ಇರಬಹುದು. ಹಾಗಾಗಿಯೇ ಆತ ಹೋದ ಕಡೆಯಲ್ಲೆಲ್ಲ ಈ ಮಾಧ್ಯಮಗಳು ಹಿಂಬಾಲಿಸುತ್ತಿವೆ.

ಮುದ್ದುಮುಖದ ಈ ಕನ್ನಯ್ಯಾಕುಮಾರ್ ಆದರೂ ಯಾರು? ಆತ ದೇಶದಲ್ಲಿರುವ ನೂರಾರು ವಿಶ್ವವಿದ್ಯಾಲಯಗಳ ಪೈಕಿ ಒಂದು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ನಾಯಕ. ಆದೂ, ರಾಷ್ಟ್ರದಲ್ಲೆಲ್ಲೂ ಅಷ್ಟಾಗಿ ಪ್ರಭಾವವಿಲ್ಲದ *ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್*‌ನ(ಭಾರತದ ಕಮ್ಯೂನಿಸ್ಟ್ ಪಕ್ಷದ ವಿದ್ಯಾರ್ಥಿ ಶಾಖೆ) ಸದಸ್ಯ. ಮಾರ್ಕ್ಸ್‌ವಾದಿ ಕಮ್ಯೂನಿಸ್ಟ್ ಪಕ್ಷದ ವಿದ್ಯಾರ್ಥಿ ಶಾಖೆಯಾದ *ಸ್ಟೂಡೆಂಟ್ಸ್ ಫೆಡರೇಷನ್ ಆಫ್ ಇಂಡಿಯಾ*ದ ಪ್ರಬಲ ನೆಲೆಯಾದ ಜೆಎನ್‌ಯುನಲ್ಲಿ ಈತ ವಿದ್ಯಾರ್ಥಿ ಸಂಘದ ಅಧ್ಯಕ್ಷನಾಗಿ ಆಯ್ಕೆಯಾಗಿದ್ದಾನೆಂದರೆ ಅದಕ್ಕೆ ಬಹುಶಃ ಕಾರಣ ಆತ ಚುರುಕಾದ ಮಾತುಗಾರನಾಗಿರುವುದೇ ಆಗಿರಬಹುದು. ಆದರೆ ಈತ ಮಾಧ್ಯಮಗಳನ್ನು ಮೆಚ್ಚಿಸುವ ಎಷ್ಟೇ ಚುರುಕಾದ ಮಾತುಗಳನ್ನಾಡಿದರೂ, ಯಾವಾಗಲೂ ಸತ್ಯವನ್ನೇ ಹೇಳುತ್ತಾನೆಂತಲ್ಲ.

ಮೊದಲಾಗಿ ಫೆಬ್ರುವರಿ ೯ರಂದು ಜೆಎನ್‌ಯನಲ್ಲಿ ಕೆಲವರು ಸಾಂಸ್ಕೃತಿಕ ಕಾರ್ಯಕ್ರಮವೆಂದು ಅಧಿಕಾರವರ್ಗದ ದಿಕ್ಕು ತಪ್ಪಿಸಿ ನಡೆಸಿದ ಅಫ್ಜಲ್ ಗುರು ಸ್ಮರಣ ದಿನಾಚರಣೆಯಲ್ಲಿನ ಈತನ ಪಾತ್ರವೇನಾಗಿತ್ತು ಎಂಬುದು ಇನ್ನೂ ಸ್ಪಷ್ಟವಾಗಿಲ್ಲ. ಹಾಗೇ ಈ ಹುಡುಗ ಸಂಘ ಪರಿವಾರವು ನಮ್ಮ ರಾಷ್ಟೀಯ ಹೋರಾಟದಲ್ಲಿ ಭಾಗವಹಿಸದೆ ಬ್ರಿಟಿಷರ ಪರವಾಗಿತ್ತು ಎನ್ನುತ್ತಾ, ತಮ್ಮ ಕಮ್ಯೂನಿಸ್ಟ್ ಪಕ್ಷ ಮಾತ್ರ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿತ್ತು ಎಂದು ಹೇಳುವ ಮಾತನ್ನು ಇತಿಹಾಸ ಬಲ್ಲವರು ಒಪ್ಪುವುದು ಕಷ್ಟ. ರಾಷ್ಟ್ರೀಯ ಹೋರಾಟವನ್ನು ಬೂರ್ಜ್ವಾ ಹೋರಾಟವೆಂದೂ, ಗಾಂಧಿಯೂ ಸೇರಿದಂತೆ ಅದರ ನಾಯಲಕರನ್ನು ಬಂಡವಾಳಶಾಹಿ ಮತ್ತು ಜಮೀನ್ದಾರಿ ವರ್ಗಗಳ ಪ್ರತಿನಿಧಿಗಳೆಂದೂ ವರ್ಣಿಸಿದ್ದ ಕಮ್ಯೂನಿಸ್ಟ್ ಪಕ್ಷ ಆಗ ವರ್ತಿಸುತ್ತಿದ್ದುದು ತನ್ನ ಜಾಗತಿಕ ನಾಯಕರ ಕೈಗೊಂಬೆಯಾಗಿ. ಒಮ್ಮೆ ರಾಷ್ಟ್ರೀಯ ಹೋರಾಟಕ್ಕೆ ಬೆಂಬಲವಾಗಿಯೂ, ಮತ್ತೊಮ್ಮೆ ಅದಕ್ಕೆ ವಿರುದ್ಧವಾಗಿಯೂ ಕಾರ್ಯಾಚರಣೆ ನಡೆಸುತ್ತಿದ್ದ ಈ ಪಕ್ಷ ೧೯೪೨ರ 'ಭಾರತ ಬಿಟ್ಟು ತೊಲಗಿ' ಚಳುವಳಿಯ ಸಂದರ್ಭದಲ್ಲಿ

ಬ್ರಿಟಿಷರ ಏಜೆಂಟರಂತೆ ವರ್ತಿಸುತ್ತಾ ಬ್ರಿಟಿಷ್ ಪ್ರಭುತ್ವದ ವಿರುದ್ಧ ಭೂಗತ ಹೋರಾಟ ನಡೆಸಿದ್ದ ಸ್ವಾತಂತ್ರ್ಯ ಹೋರಾಟಗಾರರ ಬಂಧನಕ್ಕೆ ನೆರವಾದದ್ದು ಮಾತ್ರ ಇತಿಹಾಸ ಸತ್ಯ. ಈ ಪಕ್ಷದ ಈ ಇಬ್ಬಂದಿತನ ಸ್ವಾತಂತ್ರ್ಯಾನಂತರವೂ ಮುಂದುವರೆದು, ೧೯೬೨ರ ಚೀನಾದೊಡನೆಯ ಯುದ್ಧ ಸಂದರ್ಭದಲ್ಲಿ ಪಕ್ಷದ ಒಂದು ಭಾಗ ಚೀನಾ ಬಗ್ಗೆ ಮೃದು ಧೋರಣೆ ತಾಳಿದ ಕಾರಣದಿಂದಲೇ ಇಬ್ಭಾಗವಾದದ್ದೂ ಸತ್ಯ.

ಇಂದು ಈ ಮಾರ್ಕ್ಸ್‌ವಾದಿಗಳು ಅಭಿವ್ಯಕ್ತಿ ಸ್ವಾತಂತ್ರ್ಯ ಮತ್ತು ನಾಗರಿಕ ಹಕ್ಕುಗಳ ಬಗ್ಗೆ ದನಿ ಎತ್ತಿ ಮಾತಾಡುವವರಾದರೂ, ಅವರೇ ಆಡಳಿತಕ್ಕೆ ಬಂದಾಗ ಏನಾಗುವುದು ಎಂಬುದು ಜಗತ್ತಿನ ಇತ್ತೀಚಿನ ಚರಿತ್ರೆಯಲ್ಲಿ ದಾಖಲಾಗಿದೆ. ನಮ್ಮ ಸಿಪಿಎಂ ಮತ್ತು ಸಿಪಿಐ ಪಕ್ಷಗಳು ಸಂಸದೀಯ ಪ್ರಜಾಪ್ರಭುತ್ವವನ್ನು ತಾತ್ವಿಕವಾಗಿ ಒಪ್ಪಿವೆಯಾದರೂ, ಎಲ್ಲ ಮಾರ್ಕ್ಸ್‌ವಾದಿ ಪಕ್ಷಗಳೂ ಒಪ್ಪಿಲ್ಲ ಎಂಬುದನ್ನೂ ನಾವು ಗಮನಿಸದಿರಲಾಗದು. ಒಪ್ಪಿರುವ ಈ ಎರಡು ಪಕ್ಷಗಳು ಆಡಳಿತದಲ್ಲಿದ್ದ ರಾಜ್ಯಗಳಲ್ಲಿನ ಮಾನವ ಹಕ್ಕುಗಳ ದಾಖಲೆಗಳು ಅಷ್ಟೇನೂ ಮೆಚ್ಚುವಂತಿಲ್ಲ ಎಂಬುದನ್ನೂ ಗಮನಿಸಬೇಕಾಗುತ್ತದೆ. ಇಲ್ಲದಿದ್ದರೆ ಇವರೇಕೆ ಮಮತಾ ಬ್ಯಾನರ್ಜಿಯಂತಹ ಕೂಗುಮಾರಿ ರಾಜಕಾರಣಿಗೆ ಕರುಣಾಜನಕವಾಗಿ ಮಣಿದು ನಾಲ್ಕು ದಶಕಗಳ ಅಧಿಕಾರವನ್ನು ಕಳೆದುಕೊಂಡು ಈಗ ಸಂಪೂರ್ಣ ನಿರ್ನಾಮದ ಆತಂಕವನ್ನು ಎದುರಿಸಬೇಕಿತ್ತು? ಕನ್ನಯ್ಯ ಕುಮಾರ್‌ನೆಂಬ ಬಾಲಭಾಷೆಯ ಎಳೆಹುಡುಗನನ್ನು ಈಗ ಭಾರತದ ಈ ಮಾರ್ಕ್ಸ್‌ವಾದ ಮತ್ತು ವಾದಿಗಳು ಮತ್ತೆ ಮೇಲೇಳಲು ಊರುಗೋಲನ್ನಾಗಿ ಮಾಡಿಕೊಳ್ಳಲೆತ್ನಿಸುತ್ತಿರುವುದು ಕರುಣಾಜನಕವಾಗಿ ತೋರುತ್ತದೆ.

ಇದನ್ನೆಲ್ಲ ಇಲ್ಲಿ ಹೇಳುತ್ತಿರುವುದಕ್ಕೆ ಕಾರಣ, ಕನ್ನಯ್ಯನ್ನಾಗಲೀ, ಮಾರ್ಕ್ಸ್‌ವಾದಿಗಳನ್ನಾಗಲೀ ಟೀಕಿಸಲೆಂದಲ್ಲ; ಬದಲಿಗೆ, ಸಂಘ ಪರಿವಾರದ ಅತ್ಯಂತ ವ್ಯವಸ್ಥಿತ ಮತ್ತು ದೀರ್ಘ ಗುರಿಯುಳ್ಳ ರಾಜಕಾರಣವನ್ನು ಸ್ವತಃ ನಾವು ಬದಲಾಗದೆ, ನಮ್ಮ ರಾಜಕಾರಣದ ಸುಲಭ ಸೂತ್ರ ಮತ್ತು ಘೋಷಣೆಗಳನ್ನು ಬದಲಾಯಿಸಿಕೊಳ್ಳದೆ, ಜನ ನಂಬುವಂತಹ ಒಂದು ಆತ್ಮಶೋಧನೆಯನ್ನಾಧರಿಸಿದ ಹೊಸ ರಾಜಕಾರಣವನ್ನು ರೂಪಿಸಿಕೊಳ್ಳದೆ ಎದುರಿಸಲು ಸಾಧ್ಯವಿಲ್ಲ ಎಂದು ಸೂಚಿಸಲು ಮಾತ್ರ. ಉದಾಹರಣೆಗೆ, ನಮ್ಮ ರಾಜ್ಯದಲ್ಲಿ ಈ ತಥಾಕಥಿತ ಸಮಾಜವಾದಿ ಸಿದ್ಧರಾಮಯ್ಯನವರನ್ನು ನಂಬಿಕೊಂಡು ಸಂಘ ಪರಿವಾರವನ್ನು ಎದುರಿಸಲಾದೀತೆ? ಪೂರ್ವಾಪರಗಳಿಲ್ಲದ ಲಕ್ಷಾಂತರ ರೂಪಾಯಿಗಳ ಬೆಲೆಯ ವಾಚನ್ನು ವಿಧಾನಸಭಾಧ್ಯಕ್ಷರ ಸುಪರ್ದಿಗೆ ಒಪ್ಪಿಸಿದ ಮಾತ್ರಕ್ಕೆ ಅದನ್ನು ಕಟ್ಟಿಕೊಂಡ ಅಪರಾಧ ಕೊನೆಗೊಂಡಂತಾಯಿತೇ? ಈ ವಾಚು ಪ್ರಕರಣ ಹೊರನೋಟಕ್ಕೆ ಸಣ್ಣದಾಗಿ ತೋರಿದರೂ, ಅದು ಸಿದ್ಧರಾಮಯ್ಯ ಎಷ್ಟು ಎಚ್ಚರದಪ್ಪಿದ್ದಾರೆ ಮತ್ತು ಆ ಎಚ್ಚರದಪ್ಪುವಿಕೆಯ ಹಿಂದೆ ಅವರ ವ್ಯಕ್ತಿತ್ವ ಎಷ್ಟು ನಾಶವಾಗಿದೆ ಎಂಬುದನ್ನೂ ಸೂಚಿಸುವಂತಿದೆ. ಅವರು ಕುಮಾರಸ್ವಾಮಿಯವರನ್ನು ಹೆದರಿಸಿ ಬಾಯಿ ಮುಚ್ಚಿಸಿದಷ್ಟು ಸುಲಭವಾಗಿ ರಾಜ್ಯದ ಪ್ರಜ್ಞಾವಂತ ಜನತೆಯ ಬಾಯಿ ಮುಚ್ಚಿಸಲಾಗುವುದಿಲ್ಲ.

ರಾಜ್ಯದ ಒಂದೊಂದೇ ಸಾರ್ವಜನಿಕ ಸಂಸ್ಥೆಗಳನ್ನು ಅಹಿಂದವಾದವೆಂಬ ಅಪ್ಪಟ ಜಾತಿರಾಜಕಾರಣದ ಮೂಲಕ ನಾಶ ಮಾಡುತ್ತಾ ಬಂದಿರುವ ಸಿದ್ಧರಾಮಯ್ಯ ಈಗ ಅಂತಿಮವಾಗಿ ಲೋಕಾಯುಕ್ತವನ್ನೂ ಮುಗಿಸಲು ಹೊರಟಿರುವುದು ಅವರ ರಾಜಕಾರಣದ ತಾರ್ಕಿಕ ಅಂತ್ಯವೆಂಬಂತಲೇ ಕಾಣುತ್ತಿದೆ. ಮೊನ್ನೆ ದಾವಣಗೆರೆಯಲ್ಲಿನ ದುರುಗಮ್ಮನ ಜಾತ್ರೆಯ ಸಂದರ್ಭದಲ್ಲಿ ನಡೆದ ಮಚ್ಚುಧಾರಿಗಳ ಮೆರವಣಿಗೆ ಮತ್ತು ಅದರ 'ರಕ್ಷಣೆ'ಯಲ್ಲಿ ಜರುಗಿದ ಎಮ್ಮೆ-ಕೋಣಗಳೂ ಸೇರಿದಂತೆ ಸಾವಿರಾರು ಪ್ರಾಣಿಗಳ ವಧೆಯು ಹರಿಸಿದ ರಕ್ತದ ಕೋಡಿ ಇವರ ಅಹಿಂದವಾದ ಯಾರ ಮತ್ತು ಎಂತಹ 'ಅಭಿವೃದ್ಧಿ'ಯನ್ನು ಸಾಧಿಸಿದೆ ಎಂಬುದರ ಸೂಚನೆಯಾಗಿದೆ. ರಾಜ್ಯದ ದುರಂತವೆಂದರೆ, ಇಂತಹ ಸಂದರ್ಭದಲ್ಲಿ ಸಿದ್ಧರಾಮಯ್ಯನವರನ್ನು ಎಚ್ಚರಿಸಬೇಕಿದ್ದ ಮಹನೀಯರೆಲ್ಲ ಅವರ ದರ್ಬಾರಿನಲ್ಲಿ ನಜರು ಒಪ್ಪಿಸುತ್ತಿದ್ದಾರೆ ಅಥವಾ ತಮ್ಮ ಅವಕಾಶಕ್ಕಾಗಿ ಕಾಯುತ್ತಿದ್ದಾರೆ! ಮೋದಿಯವರೇ ಎರಡು ವರ್ಷಗಳಲ್ಲಿ ಸ್ವಲ್ಪ ಬುದ್ಧಿ ಕಲಿತಂತೆ ಓಂದಿಷ್ಟು ಗ್ರಾಮಪರ ಬಜೆಟ್ ಮಂಡಿಸಿರುವಾಗ ಲೋಹಿಯಾ ಸಮಾಜವಾದಿ ಎಂದು ಹೇಳಿಕೊಳ್ಳುವ ಈ ಸಿದ್ಧರಾಮಯ್ಯನವರಿಗೇನಾಗಿದೆ ಎಂಬುದೇ ತಿಳಿಯದಾಗಿದೆ!

**–ಸಂಪಾದಕ**

## ನಿಮ್ಮ ಪತ್ರ

ಪ್ರಿಯ ಸಂಪಾದಕರೇ,

'ಹೊಸ ಮನುಷ್ಯ' ಓದುತ್ತಿದ್ದೇನೆ. ನಿಮ್ಮ ಸಂಪಾದಕೀಯ ಚೆನ್ನಾಗಿರುತ್ತದೆ. ಖಚಿತವಾದ ದೃಷ್ಟಿಯಿಂದ, ಅದನ್ನು ಎಲ್ಲಿಯೂ ಸಡಿಲಿಸದೆ ದೃಢವಾಗಿ ಆಧರಿಸಿಕೊಂಡೇ ಪ್ರಕಟವಾಗುವ ಪತ್ರಿಕೆ ಇದು. ಎಂತಲೇ ಪ್ರತೀ ಸಂಚಿಕೆಯೂ ಗಂಭೀರವಾಗಿ ಸೆಳೆಯುತ್ತದೆ. ಓದುತ್ತ ಮನಸ್ಸು ಇನ್ನಷ್ಟು ಯೋಚನೆಗೆ ತೊಡಗುತ್ತದೆ. ಅದಕ್ಕಾಗಿ ವಂದನೆ ಮತ್ತು ಅಭಿನಂದನೆ.

**–ವೈದೇಹಿ,** ಮಣಿಪಾಲ

ಮಾರ್ಚ್ ಸಂಚಿಕೆಯ ನಿಮ್ಮ ಸಂಪಾದಕೀಯ ಸದ್ಯ ನಡೆಯುತ್ತಿರುವ ರಾಷ್ಟ್ರೀಯತೆ ಕುರಿತ ಚರ್ಚೆಗಳಿಗೆ ಸಂಬಂಧಿಸಿದಂತೆ ನಾನು ಓದಿದ, ಅಪೂರ್ವ ಒಳನೋಟಗಳನ್ನುಳ್ಳ ಅತ್ಯುತ್ತಮ ಬರಹ. ಹಾಗೇ ನಿಮ್ಮ ಲೋಹಿಯಾ ಪರಿಚಯ ಲೇಖನ ಕೂಡ ಅಪರೂಪದ್ದು. ಇಂದಿರಾ ಕೃಷ್ಣಪ್ಪ ಅವರ 'ಪ್ರೊ. ಬಿ. ಕೃಷ್ಣಪ್ಪ ನೆನಪಿನ ಮಾಲೆ'ಯ ಈ ಸಂಚಿಕೆಯ ಬರಹವೂ ಮನಮಿಡಿಯುವಂತಿದೆ.

**–ಡಾ. ಎ.ಎನ್. ನಾಗರಾಜ್**, ಭೀಮನಕಟ್ಟೆ (ತೀರ್ಥಹಳ್ಳಿ)

ಕಳೆದ ಸಂಚಿಕೆಯ ನಿಮ್ಮ ಸಂಪಾದಕೀಯ ಗಾಂಧಿ ವಿಚಾರಗಳ ಹಿನ್ನೆಲೆಯೊಂದಿಗೆ ರಾಷ್ಟ್ರೀಯತೆಯ ನಿಜಾರ್ಥವನ್ನು ಪರಿಚಯಿಸುವ ಒಂದು ಅದ್ಭುತ ಬರಹವಾಗಿದೆ.

**–ಮಲ್ಲಿಕಾರ್ಜುನ ಹೊಸಪಾಳ್ಯ**, ತುಮಕೂರು

ಹಿರಿಯ ಸಮಾಜವಾದಿ ಅಮ್ಮೆಂಬಳ ಆನಂದರ 'ನೆನಪಿನಂಗಳ' ಪುಸ್ತಕದ ಬಗ್ಗೆ ನೀವು ಬರೆದುದನ್ನು ಓದಿದೆ. ಈ ಪುಸ್ತಕ ಅಂಕೋಲೆಯಲ್ಲಿ ಬಿಡುಗಡೆಯಾದ ಸಂದರ್ಭದಲ್ಲಿ ಹಾಜರಿದ್ದ ನಾನು ನಿಮ್ಮ ಅಭಿಪ್ರಾಯಗಳನ್ನು ಅಲ್ಲಗಳೆಯಲಾರೆ. ಅಂಕೋಲೆಯಿಂದ ಪ್ರಕಟವಾಗುತ್ತಿದ್ದ 'ಜನಸೇವಕ'ವಲ್ಲದೆ ಸಿದ್ಧಾಪುರದಿಂದ ಪ್ರಕಟವಾಗುತ್ತಿದ್ದ ಟಿ.ಕೆ. ಮಹಮ್ಮೂದ್‌ರ 'ಸಮಾಜವಾಣಿ' ಪತ್ರಿಕೆ ಇದ್ದೂ, ನಾಲ್ಕು ದಶಕಗಳ ಇತಿಹಾಸವಿರುವ ಉ.ಕ.ದ ಸಮಾಜವಾದಿ ಹೋರಾಟ ಹೊರಗೆ ಅಷ್ಟಾಗಿ ಪ್ರಚಾರ ಪಡೆಯಲಿಲ್ಲ. ಹಾಗಾಗಿ, ತೊಂಬತ್ತರ ಈ ವಯಸ್ಸಿನಲ್ಲೂ ಬರೆಯುವ ಉತ್ಸಾಹದಲ್ಲಿರುವ ಆನಂದರಿಂದ ಈ ಪುಸ್ತಕದಲ್ಲಿ ಇರದ ಅವರ ಸಮಾಜವಾದಿ ಹೋರಾಟ ಮತ್ತು ಪತ್ರಿಕಾ ವ್ಯವಸಾಯದ ಅನುಭವಗಳನ್ನು ಅವರಿಂದ ಬರೆಸಿ ನಿಮ್ಮ ಪತ್ರಿಕೆಯಲ್ಲಿ ಪ್ರಕಟಿಸಬಹುದಾಗಿದೆ.

**–ಮೋಹನ ಶೆಟ್ಟಿ,** ಹುಬ್ಬಳ್ಳಿ

ಮಾರ್ಚ್ ಸಂಚಿಕೆಯಲ್ಲಿನ '....ದಣಿವರಿಯದ ಹೋರಾಟಗಾರ ಲೋಹಿಯಾ' ಬರೆಹ ಅರ್ಥಪೂರ್ಣವಾಗಿ ಮೂಡಿ ಬಂದಿದೆ. ೧೫ ಪುಟಗಳಲ್ಲಿ ಹೇಳಬಹುದಾದ್ದನ್ನು ಒಂದೂವರೆ ಪುಟದಲ್ಲಿ ತುಂಬಾ ಚೊಕ್ಕವಾಗಿ ಬರೆದಿದ್ದೀರಿ. ಹಟಕ್ಕೆ ಬಿದ್ದು ಸರ್ಕಾರಿ ವೆಲ್ಲಿಂಗ್ಡನ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದ ಲೋಹಿಯಾ, ಬೌರಿಂಗ್ ಆಸ್ಪತ್ರೆಯಲ್ಲಿ ಸಲಹೆ ಪಡೆದು, ಚಿತ್ರದುರ್ಗದ ತಮ್ಮ ಮನೆ 'ವಿನಯ'ದಲ್ಲೇ ಚಿಕಿತ್ಸೆ ಪಡೆಯುತ್ತಾ ಅಸು ನೀಗಿದ ನಿಜಲಿಂಗಪ್ಪ, ಮೊನ್ನೆ ಮೊನ್ನೆಯಷ್ಟೆ ಮನೆಯಲ್ಲೇ ಚಿಕಿತ್ಸೆ ಪಡೆದು ನಮ್ಮನ್ನಗಲಿದ ಮಲೆನಾಡ ಗಾಂಧಿ ಗೋವಿಂದೇಗೌಡರು, ನೂರರ ಸಮೀಪದಲ್ಲಿರುವ ಪಾಟೀಲ ಪುಟ್ಟಪ್ಪ ಇಂದಿಗೂ ಚಿಕಿತ್ಸೆ ಪಡೆಯುವುದು ಹುಬ್ಬಳ್ಳಿಯ ಕೆ.ಎಂ.ಸಿ. ಅಥವಾ ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ. ಇವರಾರೂ ನಮ್ಮ ಇಂದಿನ ರಾಜಕಾರಣಿಗಳಿಗೆ ಆದರ್ಶರಲ್ಲ. ಶಾಸನ ರಚಿಸುವ ಶಾಸಕರೇ ತಮ್ಮ ಮಕ್ಕಳು – ಮೊಮ್ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ ಕಳಿಸದಿದ್ದರೆ, ತಾವೇ ಸರ್ಕಾರಿ ಆಸ್ಪತ್ರೆಗಳಿಗೆ ಚಿಕಿತ್ಸೆಗೆ ಹೋಗದಿದ್ದರೆ, ಯಾವ ನೈತಿಕತೆಯಿಟ್ಟುಕೊಂಡು ಇವರು ಶಾಸನ ರಚಿಸುತ್ತಾರೆ?

ಇನ್ನು 'ನನ್ನ ನೆಚ್ಚಿನ ಪುರುಷ' ಶೀರ್ಷಿಕೆಯಡಿ ಬರೆದ ಒಬ್ಬಿಬ್ಬರನ್ನು ಬಿಟ್ಟರೆ, ಉಳಿದವರೆಲ್ಲರೂ ವೈಯಕ್ತಿಕಕ್ಕೆ ಸೀಮಿತಗೊಳಿಸಿಕೊಂಡು ಬರೆದಿದ್ದಾರೆ. ನಮ್ಮ ಸಾಹಿತ್ಯ-ಪರಂಪರೆ, ಇತಿಹಾಸಗಳ ವಿಶಾಲ ಹಿನ್ನೆಲೆಯ ಆಯ್ಕೆಗಳಾಗಿದ್ದರೆ ಇನ್ನೂ ಚೆನ್ನಿತ್ತು. 'ಕಾವ್ಯೋದ್ಯಾನ'ದ ಮೂರು ಕವನಗಳು, ವಿನಯಾ ಹಾಗೂ ಸುಮಂಗಲಾರ ಕಥೆಗಳು ಚೊಕ್ಕವಾಗಿವೆ.

ಅದೇನೇ ಇರಲಿ, ನಾವು ಇಂದು ಬರೆಯುವುದು ಮಾತನಾಡುವುದು ಸಮಾನ ಮನಸ್ಕರ ಜೊತೆಗೇ ಹೊರತು, ನಮ್ಮ ವಿಚಾರಗಳು ಯಾರಿಗೆ ತಲುಪಬೇಕೋ ಅವರಿಗೆ ತಲುಪುತ್ತಿಲ್ಲ, ತಲುಪಿಸಲಾಗುತ್ತಿಲ್ಲ. ಮೂರು ದಶಕಗಳ ಹಿಂದೆ ಲಂಕೇಶ್ ಹೇಳಿದ ಮಾತು 'ನಮ್ಮ ವಿಚಾರ ಸಂಕಿರಣಗಳೆಲ್ಲಾ ಸುಗಮ ಸಂಗೀತ ಕಛೇರಿಗಳಂತಾಗಿವೆ' ಇಲ್ಲಿ ನೆನಪಾಗುತ್ತದೆ. ಆದಾಗ್ಯೂ 'ಹೊಸ ಮನುಷ್ಯ' ಇತಿ ಮಿತಿಯಲ್ಲಿ ತನ್ನ ಜವಾಬ್ದಾರಿಯನ್ನು ನಿರ್ಭಿಡೆಯಿಂದ ನಿರ್ವಹಿಸುತ್ತಿದೆ.

**–ಸಿ.ಚನ್ನಬಸವಣ್ಣ, ಬಳ್ಳಾರಿ**

## ನಮ್ಮ ಸಮಾಜವಾದಿಗಳು | ಪ್ರಖರ ಸಿದ್ಧಾಂತಿ, ಪ್ರತಿಭಾ ಸಂಪನ್ನ ಅಶೋಕ ಮೆಹ್ತಾ



**ಭಾ**ರತದಲ್ಲಿ ಸಮಾಜವಾದಿ ಆಂದೋಲನ ಮತ್ತು ಪಕ್ಷದ ಸಂಸ್ಥಾಪಕರಲ್ಲೊಬ್ಬರಾದ ಅಶೋಕ ಮೆಹ್ತಾ ಮೂಲತಃ ಅಹಮದಾಬಾದ್‌ನವರು. ಅನುಕೂಲಸ್ಥ ಶಿಕ್ಷಿತ ಕುಟುಂಬವೊಂದರಲ್ಲಿ ೧೯೧೧ರ ಅಕ್ಟೋಬರ್ ೨೪ ಜನನ. ತಂದೆ ಶಿಕ್ಷಣ ತಜ್ಞರಾದರೆ, ತಾತ ಅಹ್ಮದಾಬಾದ್ ನಗರಪಾಲಿಕೆ ಮುಖ್ಯ ಇಂಜನಿಯರ್. ಅಶೋಕ್ ಮೆಹ್ತಾ ಬಾಲ್ಯ ಕಳೆದದ್ದು ಕೈಗಾರಿಕಾ ಕಾರ್ಮಿಕರೊಡನೆ. ಅವರು ೨ ವರ್ಷದವರಾಗಿದ್ದಾಗಿನಿಂದ ಅವರ ಮನೆ ಬಳಿ ರೈಲು ಸಂಚಾರವಿತ್ತು. ಆದುದರಿಂದ ತಾವು ನಗರವಾಸಿ ಎಂಬ ಅಭಿಮಾನ ಅವರಿಗೆ! ಅಶೋಕ್ ಬೆಳೆಯುತ್ತಾ ಅಹ್ಮದಾಬಾದಿನ ಕಾರ್ಖಾನೆಗಳ ಹೊರಗೆ ಹಾದಿ ಬದಿಯಲ್ಲಿ ಕುಳಿತು ಕಾರ್ಮಿಕರೊಡನೆ ಹರಟೆ; ಅವರ ಜತೆ ಚಹಾ ಹೀರುವುದು, ಸಂಘ ಕಟ್ಟಿಕೊಳ್ಳುವಂತೆ ಅವರನ್ನು ಊಟದ ವಿರಾಮ ಸಮಯದಲ್ಲಿ ಪುಸಲಾಯಿಸುವುದು ಅವರ ದಿನಚರಿಯಾಗಿತ್ತು. ಅಷ್ಟೇ ಅಲ್ಲ, ಕೈಗಾರಿಕಾ ವಿವಾದಗಳಿಂದ ಕೆಲಸ ನಿಂತುಹೋದಾಗ ಅಶೋಕ್ ಕಾರ್ಮಿಕರ ಕುಟುಂಬಗಳಿಗೆ ಹಣಕಾಸಿನ ನೆರವಿನ ವ್ಯವಸ್ಥೆಯನ್ನೂ ಮಾಡುತ್ತಿದ್ದರು. ಅಶೋಕ ೧೯೩೧ರಲ್ಲಿ ಮುಂಬೈನ ವಿಲ್ಸನ್ ಕಾಲೇಜಿನಲ್ಲಿ ವ್ಯಾಸಂಗಮಾಡಿ ಪದವೀಧರರಾದರು. ಆಗಲೇ ಸಮಾಜವಾದಿ ಹಿನ್ನೆಲೆಯ ಯುಸುಫ್ ಮೆಹರಾಲಿ ಪ್ರಭಾವಕ್ಕೆ ಬಂದ ಎಳೆಯ ಅಶೋಕ್ ಮುಂಬೈ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಅಧ್ಯಾಪಕರಾದರಾದರೂ, ೧೯೩೨ರಲ್ಲಿ ಕೆಲಸ ಬಿಟ್ಟು ಸವಿನಯ ಅಸಹಕಾರ ಚಳವಳಿಗಿಳಿದರು.

ಮುಂಬೈನಲ್ಲಿ ದೇಶ ದ್ರೋಹದ ಆಪಾದನೆ ಮೇಲೆ ಅಶೋಕ ಬಂಧನಕ್ಕೊಳಗಾದಾಗ ಅವರಿಗೆ ೨೧ವರ್ಷ. ನಾಸಿಕ್ ಜೈಲಿನಲ್ಲಿ ಜೆಪಿ, ಮಿನೂ ಮಸಾನಿ, ಅಚ್ಯುತ ಪಟವರ್ಧನ್ ಮುಂತಾದ ಸಮಾನ ಮನಸ್ಕ ಗೆಳೆಯರ ಸಹವಾಸ. ಅಶೋಕ ಅವರಿಗೆ ಪಾಶ್ಚಿಮಾತ್ಯ ಜಗತ್ತಿಗೆ ಸಂಬಂಧಿಸಿದ ಹಲವಾರು ಅಮೂಲ್ಯ ಪುಸ್ತಕಗಳನ್ನು ಓದುವಂತೆ ಪ್ರೇರೇಪಿಸಿದರು ಜೆಪಿ. ಜೈಲಿನಲ್ಲಿ ಅಶೋಕರ ಸೂಕ್ಷ್ಮ ದೇಹ ಪ್ರಕೃತಿ ತಪಾಸಣೆ ಮಾಡಿದ ವೈದ್ಯ ಕರ್ನಲ್ ಭಂಡಾರಿ ಅವರು, ಎಂದಿನ ಆಹಾರದ ಜತೆಗೆ ಅವರಿಗೆ ಹಾಲನ್ನೂ ನೀಡುವಂತೆ ಆದೇಶಿಸಿದರು. ಆದರೆ ಸಂಕೋಚ ಪ್ರಕೃತಿಯ ಅಶೋಕ ಮೆಹ್ತಾ ಆ ಹಾಲನ್ನು ತಮ್ಮ ಇತರೆ ಮಿತ್ರರೊಡನೆ ಹಂಚಿಕೊಳ್ಳುತ್ತಿದ್ದರು. ಎರಡೂವರೆ ವರ್ಷ ಜೈಲುಶಿಕ್ಷೆ ಅವರ ಆರೋಗ್ಯ ಸುಧಾರಣೆಗೂ ನೆರವಾಯಿತು. ಹೀಗೆ ಹಲವು ತಿಂಗಳ ಪುಸ್ತಕಗಳ ಓದು, ಚರ್ಚೆ, ವಿಚಾರಗಳನ್ನು ಅರಗಿಸಿಕೊಂಡ ಈ ಗೆಳೆಯರು ದೇಶದಲ್ಲಿ ಹೊಸ ರಾಜಕೀಯ ಪಕ್ಷ ಹುಟ್ಟುಹಾಕುವ ನಿರ್ಧಾರಕ್ಕೆ ಬಂದರು. ಪಕ್ಷ ಸ್ವಾತಂತ್ರ್ಯ ಮತ್ತು ಸಮಾಜವಾದಕ್ಕೆ ಬದ್ಧವಾಗಿರಬೇಕೆಂಬ ಆಶಯ ಅವರದು. ಕಾಂಗ್ರೆಸ್‌ನ ಸದಸ್ಯತ್ವ ಇಟ್ಟುಕೊಂಡೇ ಹೊಸಪಕ್ಷದೊಂದಿಗೆ ಕೆಲಸ ಮಾಡಲು ತೀರ್ಮಾನ. ಈ ರೀತಿ ಕಾಂಗ್ರೆಸ್ ಸೋಷಲಿಸ್ಟ್ ಪಕ್ಷ ಉದಯಿಸಿತು. ಮೇ ೧೭, ೧೯೩೪ರಂದು ಪಾಟ್ನಾದಲ್ಲಿ ಸಿಎಸ್‌ಪಿ ಸ್ಥಾಪನೆಯಾಯಿತು.

ಜೆಪಿ, ಮಸಾನಿ, ಪಟವರ್ಧನ್ ಹಾಗೂ ಲೋಹಿಯಾ ಅವರೊಡನೆ ಅಶೋಕ್ ಅವರದು ಏಕ ಸೂತ್ರದಲ್ಲಿ ಹೆಣೆದುಕೊಂಡಿದ್ದ ರಾಜಕೀಯ– ಆರ್ಥಿಕ ವಿಚಾರ ಸಂಕಲ್ಪ. ಆಸೆಬುರುಕುತನ ಹಾಗೂ ಅಮಾನವೀಯ ಲಕ್ಷಣಗಳಿಂದಾಗಿ ಬಂಡವಾಳಶಾಹಿ ಅವರೆಲ್ಲರಿಗೂ ಪರಮ ವೈರಿ. ಇತಿಹಾಸ ಎಂಬುದು ವರ್ಗ ಸಂಘರ್ಷದ ಪ್ರಕ್ರಿಯೆ ಹಾಗೂ ಕಾರ್ಮಿಕ ಕ್ರಾಂತಿ ಅನಿವಾರ್ಯ. ಇದು ಸೋಷಲಿಸ್ಟರು ತಮ್ಮೆಲ್ಲ ಚರ್ಚೆಗಳಲ್ಲಿ ಆಖೈರಾಗಿ ಒಪ್ಪಿಕೊಂಡದ್ದು. ಆದರೆ ತಾವು ಎಂದಿಗೂ ಲೆನಿನ್‌ವಾದಿಯಾಗಲಿಲ್ಲ ಎನ್ನುತ್ತಾರೆ ಅಶೋಕ. ಜನತಾಂತ್ರಿಕ ಸಮಾಜವಾದಿಯಾಗಿಯೇ ಕೊನೆಯತನಕ ಉಳಿದರು ಅಶೋಕ್.

೨೪ ವರ್ಷ ವಯಸ್ಸಿನಲ್ಲೇ 'ಸಮಾಜವಾದ ಮತ್ತು ಗಾಂಧಿವಾದ' ಪುಸ್ತಕ ಬರೆದರು. ೧೯೩೮ರ ಏಪ್ರಿಲ್‌ನಲ್ಲಿ ನಡೆದ ಲಾಹೋರ್ ಸಮ್ಮೇಳನದಲ್ಲಿ ಪಕ್ಷದ ಕಾರ್ಯಕಾರಿಣಿಗೆ ಆಯ್ಕೆ. ೧೯೪೧ರಲ್ಲಿ ಗಾಂಧಿಯವರ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿ ಒಂದೂವರೆ ವರ್ಷ ಮತ್ತೆ ಜೈಲುವಾಸ. ಆಗ ಅಚ್ಯುತ ಪಟವರ್ಧನ್ ಜತೆ ಕೂಡಿಕೊಂಡು 'ದಿ ಕಮ್ಯೂನಲ್ ಟ್ರಯಾಂಗಲ್' ಪುಸ್ತಕ ಬರೆದರು. ೧೯೪೨ರಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯಲ್ಲೂ ಪಾಲ್ಗೊಂಡು ಮತ್ತೆ ಮೂರು ವರ್ಷ ಸೆರೆಮನೆ ವಾಸ. ೧೯೪೭ರಲ್ಲಿ ಕಾಂಗ್ರೆಸ್ಸಿಗರು ಇತರೆ ರಾಜಕೀಯ ಪಕ್ಷದ ಸದಸ್ಯರಾಗಿರಬಾರದು ಎಂದಾಗ ನರೇಂದ್ರ ದೇವ, ಲೋಹಿಯಾ ಮುಂತಾದವರು ಕಾಂಗ್ರೆಸ್ಸಿನಲ್ಲಿರುವ ಒಲವು ತೋರಿದರೆ ಅದರಿಂದ ಹೊರಬರುವ ನಿಲುವೆ ತಳೆದವರು ಅಶೋಕ್‌ಮೆಹ್ತಾ. ಅದೇ ವರ್ಷ ಫೆಬ್ರವರಿಯಲ್ಲಿ ಕಾನ್‌ಪುರದಲ್ಲಿ ಸೇರಿದ ಸಭೆ ಪಕ್ಷದ ಹೆಸರಿನಿಂದ ಕಾಂಗ್ರೆಸ್ ಪದ ಬಿಟ್ಟು ಸೋಷಲಿಸ್ಟ್ ಪಾರ್ಟಿ ಆಯಿತು. ಜನತಾಂತ್ರಿಕ ಸಮಾಜವಾದ ಅದರ ಮೂಲ ತತ್ವವಾಯಿತು. ನಿಸ್ಸಂದೇಹವಾಗಿ ಇದು ಅಶೋಕರ ತಾತ್ವಿಕ ಗೆಲವು.

ಕಾರ್ಮಿಕ ಸಂಘಟನೆಯಲ್ಲಿ ಆಸಕ್ತಿ ಹೊಂದಿದ್ದ ಅಶೋಕ ಮೆಹ್ತಾ, 'ಹಿಂದ್ ಮಜದೂರ್ ಸಭಾ' ರಚಿಸಿ ಮುಂಬೈ ಬಟ್ಟೆ ಗಿರಣಿ ಕಾರ್ಮಿಕರ ಮುಷ್ಕರದ ಮುಖಂಡತ್ವ ವಹಿಸಿದ್ದರು. ಗುಜರಾತಿನ ಪರಡಿಯಲ್ಲಿ ರೈತ ಚಳವಳಿಯಲ್ಲಿ ಭಾಗವಹಿಸಿ ಒಂದು ವರ್ಷದ ಜೈಲುಶಿಕ್ಷೆಗೆ ಗುರಿ. ೧೯೫೦ರ ಜುಲೈ ೮ರಿಂದ ೧೨ರವರೆಗೆ ಮದ್ರಾಸಿನಲ್ಲಿ (ಇಂದಿನ ಚೆನ್ನೈ) ಸಮಾಜವಾದಿ ಪಕ್ಷದ ೮ನೇ ಸಮಾವೇಶ. ಅಶೋಕ ಮೆಹತಾ ಅಧ್ಯಕ್ಷ ಭಾಷಣ. ಅಂದಿನ ಕಾಂಗ್ರೆಸ್ ನೇತಾರ ಆಚಾರ್ಯ ಕೃಪಲಾನಿ ಭಾಷಣದ ವಸ್ತುವನ್ನು ಟೀಕಿಸಿದರಾದರೂ ಅಶೋಕ ಅವರ ಕಾವ್ಯಮಯ ಭಾಷೆಯ ಓಘಕ್ಕೆ ಮಾರುಹೋಗಿ, ಅದು ಕವಿ ರವೀಂದ್ರರ ಶೈಲಿಗೆ ಹೋಲುತ್ತದೆ ಎಂದರು.

೧೯೫೨ರ ಮೊದಲ ಸಾರ್ವತ್ರಿಕ ಚುನಾವಣೆಗೆ ಸಿದ್ಧತೆ ಹೊಣೆ ಅಶೋಕ ಅವರ ಪಾಲಿಗೆ. ಸೋಷಲಿಸ್ಟ್ ಪಕ್ಷದ ಚುನಾವಣಾ ಪ್ರಣಾಳಿಕೆಯ ಕರಡನ್ನು ಸಿದ್ಧ ಪಡಿಸಿದವರು ಅವರೇ. ಜೆಪಿ, ಲೋಹಿಯಾ, ನರೇಂದ್ರದೇವ ಪಕ್ಷದ ಪ್ರಚಾರದಲ್ಲಿ ತೊಡಗಿಸಿಕೊಂಡರು. ಆದರೆ ಮುಂಬೈ ಉತ್ತರ ಕ್ಷೇತ್ರದಿಂದ ಅಶೋಕ ಸ್ಪರ್ಧಿಸಿ ಕೇವಲ ೯೩೭೭ ಮತಗಳ ಅಂತರದಿಂದ ಕಾಂಗ್ರೆಸ್ ಹುರಿಯಾಳಿಗೆ ಸೋತರು. ಬಹಳ ನಿರೀಕ್ಷೆ ಹೊಂದಿದ್ದ ನಾಯಕರಿಗೆ, ತಮ್ಮ ಪಕ್ಷ ಇಡೀ ದೇಶದಲ್ಲಿ ಅನುಭವಿಸಿದ ದೊಡ್ಡ ಸೋಲಿನಿಂದಾಗಿ ಕಾಂಗ್ರೆಸ್ಸಿಗೆ ಪರ್ಯಾಯವಾಗಿ ಬೆಳೆಯುವ ಆಶೆಯನ್ನು ಡೋಲಾಯಮಾನಗೊಳಿಸಿತು. ಕೃಪಲಾನಿಯವರ ಕಿಸಾನ್ ಮಜದೂರ್ ಪಕ್ಷವನ್ನು ಸೋಷಲಿಸ್ಟ್ ಪಕ್ಷದೊಡನೆ ವಿಲೀನಗೊಳಿಸಿ ಪ್ರಬಲ ಪ್ರತಿಪಕ್ಷ ಕಟ್ಟುವ ಪ್ರಯತ್ನಕ್ಕೆ ಜೆಪಿ, ಲೋಹಿಯಾ, ಅಶೋಕ ಮುಂದಾದರು. ಪ್ರಜಾ ಸಮಾಜವಾದಿ ಪಕ್ಷವೆಂದು ಪಕ್ಷಕ್ಕೆ ಮರುನಾಮಕರಣ. ವಿಲೀನ ವಿರೋಧಿಸಿದ ನರೇಂದ್ರದೇವ ಅವರನ್ನು ಮನವೊಲಿಸುವಲ್ಲಿ ಲೋಹಿಯಾ, ಅಶೋಕ ಯಶ ಕಂಡರು.

ಆದರೆ ಜೆಪಿ ನೆಹರು ನಡುವೆ ಸಹಕಾರ ಕುರಿತ ಮಾತುಕತೆ ಆರಂಭವಾದ ಹಿನ್ನೆಲೆಯಲ್ಲಿ ಪಕ್ಷದ ೧೯೫೩ರ ಜೂನ್ ೧೪–೧೮ರ ಬೇತುಲ್ ವಿಶೇಷ ಅಧಿವೇಶನದಲ್ಲಿ ನಾಯಕರ ನಡುವೆ ಮನಸ್ತಾಪಗಳು ಹುಟ್ಟಿ ಅವು ವಿರಸದ ಹಂತ ತಲುಪಿತು. ಅಶೋಕ ಮೆಹ್ತಾ ತಮ್ಮ 'ಹಿಂದುಳಿದ ಆರ್ಥಿಕತೆಗಳ ಒತ್ತಾಯಗಳು' ಎಂಬ ಸಿದ್ಧಾಂತದಡಿ ಕಾಂಗ್ರೆಸ್ ಜತೆ ಸಹಕರಿಸುವ ಒಲವು ತೋರಿದ್ದುಪಕ್ಷದಲ್ಲಿ ದೊಡ್ಡ ಕೋಲಾಹಲವನ್ನೇ ಉಂಟು ಮಾಡಿತು. ಪಕ್ಷದೊಳಗೆ ಕಾಂಗ್ರೆಸ್ ಪರ–ವಿರೋಧಿ ಎಂಬ ಎರಡು ಬಣಗಳು ಸೃಷ್ಟಿಯಾದವು. ಕಾಂಗೆಸ್ಸಿಗೆ ಪಿಎಸ್‌ಪಿ ಪರ್ಯಾಯ ಶಕ್ತಿಯಾಗಿ ಬೆಳೆಯುವುದು ದುಸ್ತರ ಎಂಬ ಅನಿಸಿಕೆ ಅಶೋಕ ಮೆಹ್ತಾ ಅವರಲ್ಲಿ ಮನೆಮಾಡಿ, ನೆಹರು ಅವರತ್ತ ವಾಲಲಾರಂಭಿಸಿದರು. ಇದು ಪಕ್ಷದಲ್ಲಿ ತೀವ್ರ ಚರ್ಚೆಯನ್ನು ಹುಟ್ಟು ಹಾಕಿ, ಮೆಹ್ತಾ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ನೀಡಬೇಕಾಯಿತು. ಆದರೆ ಪಕ್ಷ ತ್ಯಜಿಸಲಿಲ್ಲ. ಇದರ ಸುತ್ತಮುತ್ತ ನಡೆದ ಚರ್ಚೆ–ವಾದ–ವಿವಾದಗಳ ಪರಿಣಾಮವಾಗಿ ಲೋಹಿಯಾ ಪಕ್ಷ ತೊರೆದು ತಮ್ಮದೇ ಸಮಾಜವಾದಿ ಪಕ್ಷ ಸ್ಥಾಪಿಸಿಕೊಂಡು ತಮ್ಮ ದಾರಿ ಹಿಡಿದರು.

೧೯೫೭ರ ಹಾಗೂ ೧೯೬೭ರ ಚುನಾವಣೆ ಸೋತರೂ, ನಂತರ ಬಿಹಾರದ

(೫ನೇ ಪುಟಕ್ಕೆ

# ಪ್ರೊ. ಬಿ.ಕೃಷ್ಣಪ್ಪ ನೆನಪಿನ ಮಾಲೆ-೪೨

-ಇಂದಿರಾ ಬಿ.ಕೃಷ್ಣಪ್ಪ

## 'ಪಂಚಮ'ದ ಕಥೆ ಮತ್ತು ವ್ಯಥೆ

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಮುಖವಾಣಿಯಾಗಿದ್ದ 'ಪಂಚಮ' ಪತ್ರಿಕೆ ಪ್ರೊ. ಕೃಷ್ಣಪ್ಪನವರ ಜೀವನಾಡಿಯೇ ಆಗಿತ್ತು. ದಸಂಸದ ಸಭೆಯಲ್ಲಿ ತೀರ್ಮಾನವಾದಂತೆ, ಪ್ರೊ. ಬಿ.ಕೆ.ಯವರ ವ್ಯವಸ್ಥಾಪಕ ಸಂಪಾದಕತ್ವದಲ್ಲಿ ರಾಮದೇವ ರಾಕೆ, ನಂತರ ಶಿವಾಜಿ ಗಣೇಶನ್, ಗೋವಿಂದಯ್ಯನವರು ಈ ಪಾಕ್ಷಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಮೊದಲು ಭದ್ರಾವತಿಯಲ್ಲಿ ನಂತರ ಮೈಸೂರಿನಲ್ಲಿ; ಕಡೆಗೆ ಬೆಂಗಳೂರಿನಿಂದ ಮುದ್ರಣವಾಗಿ ಪ್ರಕಟಗೊಳ್ಳುತ್ತಿತ್ತು. *ಪಂಚಮ* ಸಂಘಟನೆಯ ಪತ್ರಿಕೆಯಾಗಿ ಹೊರಬರುತ್ತಿದ್ದುದರಿಂದ ಸರ್ಕಾರದ ಜಾಹೀರಾತುಗಳಾವುದೂ ಸಿಗುತ್ತಿರಲಿಲ್ಲ. ನಿಗದಿತ ಸಂಬಳ ಪಡೆಯುವ ಪದಾಧಿಕಾರಿಗಳು ಮತ್ತು ಕಾರ್ಯಕರ್ತರು ಪತ್ರಿಕೆಗೆ ಸಂಚಿತ ಹಣ ಮಾಸಿಕವಾಗಿ ಕೊಡುತ್ತಿದ್ದರು. ಅಲ್ಲದೆ, ಜನಪರ ಹೋರಾಟಗಾರರು ಸಂಘಟನೆಯ ಹಿತೈಷಿಗಳು, ಪತ್ರಿಕೆಗೆ ಉಚಿತವಾಗಿ ಬರೆಯುತ್ತಿದ್ದರು ಮತ್ತು ಧನಸಹಾಯ ಮಾಡುತ್ತಿದ್ದರು. ಅವರಲ್ಲಿ ಪ್ರಮುಖವಾಗಿ ಡಾ. ಲಕ್ಷ್ಮೀನಾರಾಯಣ್, ಮಾಜಿ ಸಚಿವೆ ಶ್ರೀಮತಿ ಮೋಟಮ್ಮ, ಭಕ್ತ ರಾಮೇಗೌಡ, ಕಿಕ್ಕೇರಿ ನಾರಾಯಣ, ಸುಮಿತ್ರಾ ಬಾಯಿ, ಸಿ.ಪಿ. ಸಿದ್ದಾಶ್ರಮ, ರಾಜಶೇಖರ್ ಎ.ಸಿ., ಸಿದ್ಧರಾಜು, ಚೆನ್ನಕೇಶವಯ್ಯ, ಪುರುಷೋತ್ತಮ ದಾಸ್, ಕಾಳಪ್ಪ, ಡಿ.ವಿ.ಕೆ. ಮೂರ್ತಿ, ಕೆ.ಎಲ್. ಮರಿಸ್ವಾಮಿ, ಸಿದ್ಧನಂಜಯ್ಯ, ಇನ್ನೂ ಮುಂತಾದವರ ನೆರವಿನ ಹಸ್ತ ಸ್ಮರಣಾರ್ಹ. ರಂಜಾನ್ ದರ್ಗಾ, ಬೋಳುವಾರು ಮೊಹ್ಮದ್ ಕುಂಞ ಇಲ್ಲದಿದ್ದರೆ ಪತ್ರಿಕೆ ಬಿಡುಗಡೆಯನ್ನೇ ಕಾಣುತ್ತಿರಲಿಲ್ಲವೇನೋ.

ಪತ್ರಿಕೆಯ ಸ್ಥಿತಿಗತಿಯ ಬಗ್ಗೆ ಸಂಪಾದಕರು, ಪತ್ರಿಕೆಯ ಖರ್ಚು ವೆಚ್ಚಗಳು ಮತ್ತು ಸಂಕಷ್ಟಗಳ ಕುರಿತು ಆಗಾಗ್ಗೆ ಕೃಷ್ಣಪ್ಪನವರಿಗೆ ಬರೆಯುತ್ತಿದ್ದರು. ಮತ್ತು ಲೇಖನಗಳಿಗಾಗಿ ಮತ್ತು ಕೃಷ್ಣಪ್ಪನವರ ವಂತಿಕೆಗಾಗಿ ಜ್ಞಾಪಿಸುತ್ತಿದ್ದರು. ಕದಸಂಸದ ಹೋರಾಟಗಳನ್ನು ರೂಪಿಸುವುದು, ಪತ್ರಿಕಾ ಹೇಳಿಕೆ, ಕರಪತ್ರ, ಸಭೆ, ಮಾಹಿತಿ ತಯಾರಿಸುವುದರಲ್ಲೇ ಮಗ್ನರಾಗಿರುತ್ತಿದ್ದ ಕೃಷ್ಣಪ್ಪನವರಿಗೆ 'ಪಂಚಮ'ಕ್ಕಾಗಿ ಲೇಖನ ಬರೆಯಲು ಸಾಧ್ಯವಾಗುತ್ತಿರಲಿಲ್ಲ. ಪತ್ರಿಕೆಯ ಸುಮಾರು ೧೫ ವರ್ಷಗಳ ಇತಿಹಾಸದಲ್ಲಿ ಕೃಷ್ಣಪ್ಪನವರು ಅಂದಾಜು ೧೨ ಲೇಖನಗಳನ್ನು ಬರೆದಿರಬಹುದು ಅಷ್ಟೇ. (ಅವುಗಳನ್ನು ಪ್ರೊ. ಬಿ. ಕೃಷ್ಣಪ್ಪ ಟ್ರಸ್ಟ್ ಮುಖಾಂತರ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ.) ಹೀಗೆ ಲೇಖನ ಕಳುಹಿಸಲು ವಿಳಂಬ ಮಾಡಿದಾಗ, ದೇವನೂರು ಮಹಾದೇವರವರು ಪತ್ರ ಬರೆದು, ನೀವು ಪಂಚಮಕ್ಕೆ ಸರಿಯಾಗಿ ಬರೆಯುತ್ತಿಲ್ಲ, ಡಿಎಸ್ಎಸ್ ಹುಟ್ಟಿದಾಗಿನಿಂದ ನಡೆಸಿದ ಹೋರಾಟಗಳನ್ನು ಅನುಕ್ರಮವಾಗಿ, ಎಂದು, ಹೇಗೆ, ಯಾರ್‍ಯಾರು, ಯಾಕಾಗಿ ನಡೆಯಿತು? ಯಾವ್ಯಾವ ವರ್ಗದಿಂದ ಏನೇನು ಪತ್ರಿಕೆಗಳಲ್ಲಿ ಬಂತು? ತಪ್ಪು, ಮಿತಿ, ಗೆಲುವು-ಸೋಲು ಇತ್ಯಾದಿ, ಒಂದಾದ ಮೇಲೊಂದರಂತೆ ಬರೆದು ಕಳುಹಿಸಿ ಎಂದೂ, ವ್ಯವಸ್ಥಾಪಕರಾಗಿ ನಿರ್ವಹಿಸಬೇಕಾದ ಜವಾಬ್ದಾರಿಯನ್ನು ಕೃಷ್ಣಪ್ಪ ವಹಿಸಿಕೊಂಡಲ್ಲಿ, ಪಂಚಮದ ಅರ್ಥ ಸಮಸ್ಯೆ ಬಗೆಹರಿವುದೆಂದು ಇದಕ್ಕೆ ಒಪ್ಪಿಕೊಳ್ಳಬೇಕೆಂದು ಆಗ್ರಹಪೂರ್ವಕವಾಗಿ ಪತ್ರ ಬರೆದರು..

ಮೊದಲು ಕೃಷ್ಣಪ್ಪನವರು ವ್ಯವಸ್ಥಾಪಕ ಸಂಪಾದಕತ್ವದಲ್ಲಿ, ಪ್ರಕಟವಾಗುತ್ತಿದ್ದ *ಪಂಚಮ* ಕಾಲಾಂತರದಲ್ಲಿ ಚಂದ್ರಪ್ರಸಾದ್ ತ್ಯಾಗಿ, ರಂಗಸ್ವಾಮಿ ಬೆಲ್ಲದಮಡು ಇನ್ನೂ ಮುಂತಾದವರ ನಿಗಾದಲ್ಲಿ ಪ್ರಕಟವಾಗತೊಡಗಿತು. ಅಪಾರ ಶ್ರಮದಿಂದ ಪತ್ರಿಕೆಯನ್ನು ಪ್ರಕಟಿಸುವುದು ಮತ್ತು ಹಣ ಸಂಗ್ರಹಣೆಯ ಸಮಸ್ಯೆಗಳು ಎದುರಾದಾಗ, ಸಂಪಾದಕತ್ವದ ಜವಾಬ್ದಾರಿ ಹೊತ್ತ ಶಿವಾಜಿ ಗಣೇಶನ್ ಮತ್ತು ರಾಮದೇವ ರಾಕೆಯವರು ತೀರಾ ಬೇಸತ್ತು 'ಪತ್ರಿಕೆ ಇನ್ನು ತರಲಿಕ್ಕೆ ಸಾಧ್ಯವಿಲ್ಲ'ವೆಂದು ಜವಾಬ್ದಾರಿಯಿಂದ ಮುಕ್ತ ಮಾಡಬೇಕೆಂದು ಕೋರಿದ್ದರು. ಈ ವಿಷಯದಲ್ಲಿ ಡಾ. ಸಿದ್ದಲಿಂಗಯ್ಯನವರೂ ಪತ್ರ ಬರೆಯಲಾರಂಭಿಸಿದರು. ಇದರ ನಡುವೆ ಬೆಂಗಳೂರಿನಲ್ಲಿ ಶಿವಾಜಿ ಗಣೇಶನ್, ಮತ್ತು ರಾಕೆಯವರ ಪ್ರಾಮಾಣಿಕತೆ, ಜವಾಬ್ದಾರಿಗಳ ಬಗ್ಗೆ ಆರೋಪಗಳು - ಪ್ರಶ್ನೆಗಳು ಬಂದವು. ಇದರಿಂದ ಬಹುವಾಗಿ ನೊಂದ ಇವರಿಬ್ಬರೂ ದೇವನೂರು ಮಹಾದೇವರಲ್ಲಿ ಹೇಳಿಕೊಂಡಿದ್ದರು. ಮತ್ತು ವಿವರವಾದ ಪತ್ರವನ್ನು ಕೃಷ್ಣಪ್ಪನವರಿಗೂ ಬರೆದರು.

ಪಂಚಮ



ಅಂಬೇಡ್ಕರ್ ಸ್ಮರಣೆ : ಜಿಲ್ಲಾ ಸಮಾವೇಶ

ಕೃಷ್ಣಪ್ಪನವರೊಡನೆ ಭೇಟಿಯಾಗಿ ಮಾತುಕತೆ ನಡೆಸಿದ್ದರು. "ನಮ್ಮ ನಡುವಿರುವ ಕೆಲವರ ಬಗ್ಗೆ ಸೂಕ್ಷ್ಮ ಎಚ್ಚರಿಕೆ ಇಲ್ಲದಿದ್ದರೆ ಇಡೀ ಸಂಘಟನೆಗೆ ಅಪಾಯ ತಪ್ಪಿದ್ದಲ್ಲ ಎಂಬ ಭಯವಿರುವುದರಿಂದ ಎಲ್ಲಾ ವಿಷಯವನ್ನು ತಿಳಿಸಿದ್ದೇವೆಂದು" ಹೇಳಿಕೊಂಡಿದ್ದರು.

'ಪಂಚಮ' ಸಂಘಟನೆಯ ಅಂತರ್ಯದ ನುಡಿಯಾಗಿ, ಮುಖವಾಣಿಯಾಗಿ, ಹೋರಾಟದ ದಿಕ್ಕು ದೆಸೆಯ ಧ್ವನಿಯಾಗಿ, ಸರ್ಕಾರಕ್ಕೆ ಎಚ್ಚರಿಕೆಯ ಗಂಟೆಯಾಗಿ, ಕವಿಗಳ ಕಥನ - ಕವನಗಳಾಗಿ, ಕಾರ್ಯಕರ್ತರ ಸಹಾಯವಾಣಿಯಾಗಿ, ಹೋರಾಟಗಾರರ ಮನದ ಮಾತಾಗಿ ನೊಂದವರಿಗೆ ಸಾಂತ್ವನವಾಗಿ ಹೊರಹೊಮ್ಮುತ್ತಿತ್ತು. ಎರಡು ದಶಕಗಳ ಸುದೀರ್ಘ ಅವಧಿಯಲ್ಲಿ ಕಾಲಕಾಲಕ್ಕೆ ದೇವನೂರು ಮಹಾದೇವ, ಪ್ರೊ. ಬಿ.ಕೆ., ಎಚ್.ಗೋವಿಂದಯ್ಯ, ಶಿವಾಜಿ ಗಣೇಶನ್, ರಾಮದೇವ ರಾಕೆ, ಇಂದೂಧರ ಹೊನ್ನಾಪುರ, ಮುಳ್ಳೂರು ನಾಗರಾಜ್ ಮತ್ತು ರಂಗಸ್ವಾಮಿ ಬೆಲ್ಲದಮಡು, ಹುಲ್ಲುಕೆರೆ ಮಹಾದೇವ, ಕೆ. ರಾಮಯ್ಯ ಇವರೆಲ್ಲರ ಸಂಪಾದಕತ್ವದಲ್ಲಿ ನಾಡಿನ ದಲಿತರ ವಿಮೋಚನಾ ಹೋರಾಟದ ಕಥೆಯನ್ನು ಜನರ ಮುಂದೆ ಬಿಚ್ಚಿಡುತ್ತಾ, ಜನರ ಮಾನವೀಯತೆಯನ್ನೂ ಮತ್ತು ಪ್ರಭುತ್ವದ ಹೊಣೆಗಾರಿಕೆಯನ್ನು ಜಾಗೃತಗೊಳಿಸಿತ್ತು. ದಲಿತ ಮತ್ತು ರೈತ ಚಳುವಳಿಗಳು ಉತ್ತುಂಗದಲ್ಲಿದ್ದಾಗ ಅವೆರಡನ್ನೂ ಕೂಡಿಸಿ ಹೊಸದೊಂದು ರಾಜಕೀಯ ಶಕ್ತಿ ಕಟ್ಟುವ ಪ್ರಯತ್ನಕ್ಕೆ ಪೂರ್ವಭಾವಿಯಾಗಿ ೧೯೮೫ರಲ್ಲಿ ಗೋವಿಂದಯ್ಯನವರೊಡನೆ ಡಿ.ಎಸ್. ನಾಗಭೂಷಣ ಅವರು ಸೇರಿ ಹೊರತಂದ ಕೆ.ಟಿ ಶಿಪ್ರಸಾದರ ಬಹುವರ್ಣ ಛಾಯಾಚಿತ್ರದ ಮುಖಪುಟವಿದ್ದ ದ+ರೈ ವಿಶೇಷ ಸಂಚಿಕೆ 'ಪಂಚಮ'ದ ಇತಿಹಾಸದಲ್ಲಿ ಒಂದು ಮೈಲಿಗಲ್ಲು ಎಂದು ಹೇಳಬಹುದು. ಅದರಲ್ಲಿ ಆ ಕಾಲಘಟ್ಟದಲ್ಲಿ ಸಾಮಾಜಿಕ ಬದ್ಧತೆಯುಳ್ಳ ಚಳುವಳಿಗಳೊಂದಿಗೆ ಸಹಾನುಭೂತಿ ಹೊಂದಿದ್ದ ಕನ್ನಡದ ಬಹುಪಾಲು ಎಲ್ಲ ಚಿಂತಕರೂ ಲೇಖನಗಳನ್ನು ಬರೆದಿದ್ದುದು ಒಂದು ವಿಶೇಷ. ಆ ಸಂಚಿಕೆಯಲ್ಲಿನ ಲೇಖನಗಳು ಮತ್ತು ಸಂದರ್ಶನಗಳು ಈಗಲೂ ಚರ್ಚೆಗೆ ಒಳಗಾಗುವಷ್ಟು ಮಹತ್ವದ್ದಾಗಿವೆ.

ಪತ್ರಿಕೆ ನಡೆಸಿದವರಿಗೆ, ಅದರೊಳಗಿನ ಆರ್ಥಿಕ ಬಿಕ್ಕಟ್ಟುಗಳು, ನುಂಗಲೆಣೆಯಿಲ್ಲದ ಸಮಸ್ಯೆಗಳು ಕುಟ್ಟೆ ಹುಳುವಿನಂತೆ ಕೊರೆಯಬಲ್ಲದು ಎಂಬುದು ಅರ್ಥವಾಗುತ್ತದೆ. ಬಿಡಿ ಪ್ರತಿ ಬೆಲೆ ೨೦ಪೈಸೆಯಿಂದ ಆರಂಭವಾಗಿ ವಾರ್ಷಿಕ ಚಂದಾ ರೂ ೨ ರಿಂದ ೪೦ಕ್ಕೆ ಏರಲ್ಪಟ್ಟಿತು. ೧೯೮೦ರ ದಶಕದ ಪೂರ್ವಾರ್ಧದಲ್ಲಿ ಒಂದೆರಡು ಜಾಹೀರಾತುಗಳು ನಿರಂತರವಾಗಿ ದೊರೆಯಲಾರಂಭವಾದ ನಂತರ ಪತ್ರಿಕೆ ಚೇತರಿಸಿಕೊಂಡಿತು. ರಾಜ್ಯ ಸಮಿತಿಯಲ್ಲಿ ಪತ್ರಿಕೆ ಬಗ್ಗೆ ಸಕಾರಾತ್ಮಕ ನಿಲುವುಗಳಿಗೆ ಕಾರ್ಯಕರ್ತರು ಬದ್ಧರಾಗಿದ್ದರಿಂದ ಪಾಕ್ಷಿಕವಾಗಿದ್ದ ಪತ್ರಿಕೆ, ಮಾಸಿಕ, ದ್ವೈಮಾಸಿಕ ಕಡೆಗೆ ಅರ್ಧವಾರ್ಷಿಕದ ಮಟ್ಟಕ್ಕೂ ಇಳಿದಿದ್ದುಂಟು! ಮಧ್ಯೆ ಒಂದೆರಡು ವರ್ಷ ನಿಲ್ಲಿಸುವ ಸ್ಥಿತಿಗೂ ಬಂದಿತ್ತು. ಪತ್ರಿಕೆಯ ಸೆಳೆತದಿಂದ ಬಿಡಿಸಿಕೊಳ್ಳಲಾರದ ನಾಯಕರು ಮತ್ತು ಕಾರ್ಯಕರ್ತರು 'ಪಂಚಮ'ದ ಉಳಿವಿಗಾಗಿ ಅನೇಕ ಸುಧಾರಣಾ ಕ್ರಮಗಳನ್ನು ಕೈಗೊಂಡಿದ್ದರು. ಸಂಪಾದಕ ಮತ್ತು ಸಂಪಾದಕ ಮಂಡಳಿ ಬದಲಾವಣೆ, ಜಾಹೀರಾತು ಸಂಗ್ರಹಣೆ, ಚಂದಾ ಹಣ ಪರಿಷ್ಕರಣೆ, ಸದಸ್ಯತ್ವ ನೋಂದಣಿ, ಜಿಲ್ಲಾವಾರು ಮಾಹಿತಿ ಪ್ರಕಟಣೆ, ಪ್ರತ್ಯೇಕ 'ಪಂಚಮ'ವನ್ನು ಗುಲ್ಬರ್ಗಾ ಆವೃತ್ತಿಯಾಗಿ ತರಬೇಕೆಂಬ ಪ್ರಸ್ತಾಪಗಳು ಬಂದಿದ್ದವು. ಈ ವಿಷಯದಲ್ಲಿ ಕೃಷ್ಣಪ್ಪನವರು ದೇವನೂರು ಮಹಾದೇವ, ಹರವೆ ಮತ್ತೆಲ್ಲಾ


ರಾಮದೇವ ರಾಕೆ ಶಿವಾಜಿ ಗಣೇಶನ್ ಎಚ್. ಗೋವಿಂದಯ್ಯ ಕೆ. ರಾಮಯ್ಯ

ಗೆಳೆಯರೊಂದಿಗೆ ಮಾತುಕತೆ ನಡೆಸಿದರು.

ಹಲವು ಗೆಳೆಯರು ಇದನ್ನು ಒಪ್ಪಿದರು. ಆದರೆ, ದೇವಯ್ಯ ಹರವೆಯವರು ಮಾತ್ರ ಇದನ್ನು ಒಪ್ಪದೆ ಸುಧೀರ್ಘ ಪತ್ರವನ್ನೇ ಬರೆದರು. ಆ ಪತ್ರದಲ್ಲಿ ಪಂಚಮದ ಸದಸ್ಯತ್ವದ ಸಂಖ್ಯೆಯ ಮಿತಿ, ಹೊಸ ಲೇಖಕರ ಅಭಾವ, ಸಂಘಟನೆಯ ತಾತ್ವಿಕತೆ, ವಿಷಯಗಳ ವ್ಯಾಪಕತೆ ಕ್ಷೀಣಿಸುವಿಕೆ ಇತ್ಯಾದಿ ಹಲವು ಪ್ರಶ್ನೆಗಳಿಟ್ಟು ಪಂಚಮ ಪತ್ರಿಕೆ ಮತ್ತು ಪಂಚಮ ಪ್ರಕಾಶನದ ವಿಂಗಡಣೆ ಕಡೆ ಗಮನ ಕೊಡಲು ಕೃಷ್ಣಪ್ಪನವರಿಗೆ ಸಲಹೆ ನೀಡಿದ್ದರು. ತದ ನಂತರದಲ್ಲಿ ರಾಜ್ಯ ಸಮಿತಿಯಲ್ಲಿ ತೀರ್ಮಾನಿಸಿ ಉತ್ತರ ಕರ್ನಾಟಕದ ಆವೃತ್ತಿ ತರುವ ಪ್ರಸ್ತಾಪ ಕೈಬಿಡಲಾಯಿತು. ಎಲ್ಲ ಜಿಲ್ಲೆಗಳಿಗೂ ಕೃಷ್ಣಪ್ಪ ಸುತ್ತೋಲೆಗಳನ್ನು ಕಳುಹಿಸಿ, "ಪ್ರತಿ ಜಿಲ್ಲೆಯಲ್ಲಿ ನಡೆದ ಕಾರ್ಯಕ್ರಮಗಳ ವರದಿಗಳನ್ನು ಪಂಚಮಕ್ಕೆ ಕಳುಹಿಸಬೇಕೆಂದು" ತಾಕೀತು ಮಾಡಿದರು. ದೇವನೂರುರವರು ಪಂಚಮಕ್ಕಾಗಿ ಪ್ರತ್ಯೇಕ ಮುದ್ರಣಾಲಯ ಸ್ಥಾಪಿಸಲು ಪ್ರಯತ್ನಿಸಿದರು.

ಮುಳ್ಳೂರು ನಾಗರಾಜ್‌ರವರ ಸಂಪಾದಕತ್ವದಲ್ಲಿ, ಪತ್ರಿಕೆ ನಡೆಸಲು ಭದ್ರಾವತಿಯ ಬಿ.ಆರ್.ಪ್ರಾಜೆಕ್ಟ್‌ನಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಲಾಗಿತ್ತು. ಆದರೆ ಒಂದು ವರ್ಷವಾದರೂ ಪತ್ರಿಕೆ ಪ್ರಕಟಗೊಳ್ಳದೆ ಇರುವ ಬಗ್ಗೆ ಆರೋಪಗಳು, ಅಶಿಸ್ತು, ಪ್ರಾಮಾಣಿಕತೆಯ ಪ್ರಶ್ನೆಗಳು ಎದ್ದಿದ್ದವು. ತದನಂತರ ೧೯೮೬ರಲ್ಲಿ ತುಮಕೂರಿನಲ್ಲಿ ನಡೆದ ಸಭೆಯಲ್ಲಿ ರಂಗಸ್ವಾಮಿ ಬೆಲ್ಲದಮಡುರವರ ಸಂಪಾದಕತ್ವದಲ್ಲಿ ಮತ್ತು ಹಿಂದಿನ ಸಂಪಾದಕರುಗಳ ಸಂಪಾದಕ ಮಂಡಳಿಯೊಂದಿಗೆ ಪತ್ರಿಕೆ ತರಲು ಪ್ರಯತ್ನಗಳು ನಡೆದವು. ಎಕಮಾತ್ರ ಸಂಚಿಕೆ ತಂದ ಮುಳ್ಳೂರು ನಾಗರಾಜ್, ತಮ್ಮ ಮೇಲಿನ ಅಪಪ್ರಚಾರಗಳನ್ನು ತಳ್ಳಿಹಾಕುತ್ತ, ಇದೊಂದು ಪೂರ್ವ ಉದ್ದೇಶಿತ ಕ್ರಮವೆಂದು, ಕುತಂತ್ರವೆಂದು, 'ಸುದ್ದಿಸಂಗಾತಿ' ಪತ್ರಿಕೆ ತರಲು ಎಲ್ಲರು ಸೇರಿ ಸಂಚು ಮಾಡಿದ್ದಾರೆಂದು, ಪಂಚಮದ ಹಣವನ್ನು ನುಂಗಿ ಹಾಕಿದವರ ವಿವರವನ್ನು ಬಯಲು ಮಾಡುವುದಾಗಿಯೂ ಕೃಷ್ಣಪ್ಪನವರಿಗೆ ಪತ್ರ ಬರೆದರು.

ಮಧ್ಯಂತರದಲ್ಲಿ 'ಸುದ್ದಿ ಸಂಗಾತಿ' ಎಂಬ ಕನ್ನಡ ಸುದ್ದಿ ಮತ್ತು ಸಾಂಸ್ಕೃತಿಕ ವಾರ ಪತ್ರಿಕೆ ಇಂದೂಧರ ಹೊನ್ನಾಪುರರವರ ಸಂಪಾದಕತ್ವದಲ್ಲಿ, ದೇವನೂರು ಮಹಾದೇವ, ಕೆ.ಬಿ.ಸಿದ್ದಯ್ಯ, ಬಾನು ಮುಷ್ತಾಕ್, ಹಾಸನದ ಮುನಿವೆಂಕಟೇಗೌಡ, ಧರ್ಮರಾಜ್, ಖ್ಯಾತ ವಕೀಲರಾದ ಸಿ.ಹೆಚ್. ಹನುಮಂತರಾಯರ ಸಂಪಾದಕ ಮಂಡಳಿಯೊಂದಿಗೆ, ಉಪಸಂಪಾದಕ ಮಂಗಳೂರು ವಿಜಯ, ಪ್ರಧಾನ ವರದಿಗಾರರಾಗಿ ಕೆ. ರಾಮಯ್ಯನವರ ಸಾರಥ್ಯದಲ್ಲಿ ದಿ.೨೫.೧೦.೧೯೮೫ರಲ್ಲಿ ಆಗಿನ ಮುಖ್ಯ ಮಂತ್ರಿಗಳಾದ ರಾಮಕೃಷ್ಣ ಹೆಗ್ಡೆ, ಮತ್ತು ವಿರೋಧ ಪಕ್ಷದ ನಾಯಕರಾದ ಎಸ್. ಬಂಗಾರಪ್ಪನವರ ಸಾನ್ನಿಧ್ಯದಲ್ಲಿ ಸಚಿವರಾಗಿದ್ದ ಜೀವರಾಜ ಆಳ್ವರವರ ಅಧ್ಯಕ್ಷತೆಯಲ್ಲಿ ಪಿ. ಲಂಕೇಶ್ ಅವರು ಬಿಡುಗಡೆ ಮಾಡಿದ್ದರು. ಇದರಿಂದ 'ಪಂಚಮ' ಪತ್ರಿಕೆಯ ಅವಸಾನದ ವೇದಿಕೆ ಸಿದ್ಧಗೊಂಡಂತಾಯಿತು. ಹೀಗಿದ್ದೂ, 'ಸುದ್ದಿಸಂಗಾತಿ', ಅದರ ಅಂತಿಮ ಸಂಚಿಕೆ ಹೊರಬರುವವರೆಗೂ ನಮ್ಮ ಮನೆಗೆ ಆ ಪತ್ರಿಕೆ ತರಿಸಲಾಗುತ್ತಿತ್ತು. ಇಂದೂಧರ ಅವರು ಪತ್ರಿಕೆಗಾಗಿ ಷೇರು ಸಂಗ್ರಹಕ್ಕಾಗಿ ಕೃಷ್ಣಪ್ಪನವರ ಸಹಕಾರವನ್ನು ಬಯಸಿದ್ದರು. ಅದು ಎಷ್ಟರ ಮಟ್ಟಿಗೆ ನೆರವೇರಿತ್ತೋ ನನಗೆ ಗೊತ್ತಿಲ್ಲ. ಆದರೆ ಪಂಚಮ ಪತ್ರಿಕೆಯ ಎರಡು ದಶಕದ ಕಲ್ಲುಮುಳ್ಳುಗಳ ನಡುವೆ ಸವೆಸಿದ ಹಾದಿ ಗೋಚರವಾಗುತ್ತಿತ್ತು. ಅವೇ ನೆನಪುಗಳೇ ಇಲ್ಲಿ ಅಕ್ಷರವಾಯಿತು.

(ಮುಂದುವರೆಯುವುದು)

೩ನೇ ಪುಟದಿಂದ)

ಮುಜಫರ್‌ಪುರದಿಂದ ನಡೆದ ಉಪ ಚುನಾವಣೆಯಲ್ಲಿ ಗೆದ್ದು ಲೋಕಸಭೆಗೆ ಆಯ್ಕೆಯಾದ ಅಶೋಕ ಮೆಹ್ತಾ, ೧೯೬೩ರಲ್ಲಿ ವಿಶ್ವ ಸಂಸ್ಥೆ ಜನರಲ್ ಅಸೆಂಬ್ಲಿಗೆ ಭಾರತ ನಿಯೋಗದ ಉಪನಾಯಕನಾಗಲು ಪ್ರಧಾನಿ ನೆಹ್ರೂ ನೀಡಿದ ಆಹ್ವಾನವನ್ನು ಒಪ್ಪಿಕೊಂಡರು. ಈ 'ಸಹಕಾರ' ಇಷ್ಟಕ್ಕೇ ಮುಗಿಯದೆ ೧೯೬೩ರ ಅಕ್ಟೋಬರ್‌ನಲ್ಲಿ ನೆಹರು ಅಶೋಕ ಅವರನ್ನು ಯೋಜನಾ ಆಯೋಗದ ಉಪಾಧ್ಯಕ್ಷರನ್ನಾಗಿ ನೇಮಿಸಿದರು. ಯೋಜನಾಬದ್ಧ ಪ್ರಗತಿ ತಮ್ಮ ಆರ್ಥಿಕ ಸಿದ್ಧಾಂತಕ್ಕೆ ಅನುಗುಣವಾಗಿದ್ದು, ಇದು ತ್ವರಿತ ವಿಕಾಸಕ್ಕೆ ಅಗತ್ಯ ಎಂದು ಪ್ರತಿಪಾದಿಸಿದ ಅವರು ಕಾಂಗ್ರೆಸ್ ಸರ್ಕಾರದ ಈ ಆಹ್ವಾನವನ್ನೂ ಒಪ್ಪಿಕೊಂಡರು.

ಇದು ಮತ್ತೆ ಪಿಎಸ್‌ಪಿ ಪಕ್ಷದಲ್ಲಿ ಇರುಸುಮುರುಸಿಗೆ ಕಾರಣವಾಗಿ, ಆಗ ಪಕ್ಷದ ಅಧ್ಯಕ್ಷರಾಗಿದ್ದ ಅಶೋಕರನ್ನೇ ಪಕ್ಷದ ಪ್ರಾಥಮಿಕ ಸದಸ್ಯತ್ವದಿಂದ ವಜಾ ಮಾಡುವ ಚಾರಿತ್ರಿಕ ಠರಾವು ಪಾಸಾಯಿತು. ಇದು ಅಶೋಕರಿಗೆ ತಮ್ಮ ಬೆಂಬಲಿಗರೊಡನೆ ಕಾಂಗ್ರೆಸ್ ಸೇರಲು ನಾಂದಿಯಾಯಿತು. ೧೯೬೬ರಲ್ಲಿ ಯೋಜನಾ ಖಾತೆ ಸಚಿವರಾದರು. ರಾಜ್ಯ ಸಭೆಗೆ ಆಯ್ಕೆಯಾಗಿ ೧೯೬೭ರ ಫೆಬ್ರವರಿವರೆಗೆ ಅದರ ಸದಸ್ಯರಾಗಿದ್ದರು. ೧೯೬೭ರಲ್ಲಿ ಭಂಡಾರಾ ಕ್ಷೇತ್ರದಿಂದ ಕಾಂಗ್ರೆಸ್ ಉಮೇದುವಾರರಾಗಿ ಲೋಕಸಭೆಗೆ ಆರಿಸಿ ಬಂದರು. ಇಂದಿರಾಗಾಂಧಿ ಸಂಪುಟದಲ್ಲಿ ಮತ್ತೆ ಸಚಿವರಾದರು. ಆದರೆ ಜಕೋಸ್ಲೋವಾಕಿಯಾ ಮೇಲೆ ಸೋವಿಯತ್ ರಷ್ಯಾದ ಆಕ್ರಮಣವನ್ನು ಭಾರತ ಸರ್ಕಾರ ಖಂಡಿಸದಿದ್ದಾಗ ಸಚಿವ ಹುದ್ದೆಗೆ ರಾಜೀನಾಮೆ ನೀಡಿದರು. ಇಂದಿರಾ ಗಾಂಧಿ ಕೈಗೊಂಡ ರೂಪಾಯಿ ಅಪಮೌಲ್ಯಕ್ಕೆ ಅಶೋಕ ಮೆಹ್ತಾ ಕಾರಣ ಎಂದು ಮಾಧ್ಯಮ ಬಿಂಬಿಸಿದಾಗ, ಅವರ ಬೆಂಬಲಕ್ಕೆ ಯಾರೂ ಬರಲಿಲ್ಲ ಎಂಬ ಸಂಗತಿ ಇಂದಿರಾ–ಅಶೋಕರ ನಡುವೆ ಬಿರುಕು ಬೆಳೆದಿದೆ ಎನ್ನುವುದಕ್ಕೆ ಸಾಕ್ಷಿಯಾಯಿತು. ೧೯೬೯ರಲ್ಲಿ ಇಂದಿರಾ ಕಾಂಗ್ರೆಸ್‌ನ್ನು ಹೋಳು ಮಾಡಿದಾಗ, ಅಶೋಕ ಸಿಂಡಿಕೇಟ್ ಜತೆ ಸೇರಿದರು. ಅವರ ಈ ಒಟ್ಟು ರಾಜಕಾರಣ, ತಮಗೆ ಪ್ರಿಯವಾದ ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ದುಗಳಂತಹ ನೀತಿಗಳನ್ನು ಶ್ರೀಮತಿ ಗಾಂಧಿ ಪ್ರಕಟಿಸಿದಾಗ ಅದನ್ನು ವಿರೋಧಿಸಬೇಕಾದ ವಿಪರ್ಯಾಸಕ್ಕೆ ಅವರನ್ನು ದೂಡಿತು.

೧೯೭೧ರ ಚುನಾವಣೆಯಲ್ಲಿ ಸೋಲು ಕಂಡ ಅಶೋಕ ಮೆಹ್ತಾ, ೧೯೭೩–೭೪ರ ಜೆಪಿ ಚಳವಳಿಯಲ್ಲಿ ಸಕ್ರಿಯರಾದರು. ೧೯೭೫ರ ಜೂನ್ ೨೫ರಂದು ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಘೋಷಿಸಿದಾಗ ವಿರೋಧ ಪಕ್ಷಗಳ ಹಲವು ನಾಯಕರಂತೆಯೇ ಅವರೂ ಸೆರೆಮನೆ ಸೇರಬೇಕಾಯಿತು. ಹರ್‍ಯಾಣದ ರೋಹ್ತಕ್ ಜೈಲಿನಲ್ಲಿ ಅವರಿಂದ 'ರಿಫ್ಲೆಕ್ಷನ್ ಆಫ್ ಸೋಷಲಿಸ್ಟ್ ಇರಾ' ಎಂಬ ಅದ್ಭುತ ಕೃತಿ ರಚನೆಯಾಯಿತು. 'ಇದಕ್ಕೆ ನೆರವಾದ ಪ್ರಧಾನಿಗೆ ನಾನು ಆಭಾರಿ' ಎಂದೂ ಅಶೋಕ ವ್ಯಂಗ್ಯಭರಿತವಾಗಿ ಅದರ ಮುನ್ನುಡಿಯಲ್ಲಿ ಬರೆದರು. ತುರ್ತು ಪರಿಸ್ಥಿತಿ ನಂತರ ವಿರೋಧ ಪಕ್ಷಗಳ ಒಗ್ಗಟ್ಟಿನ ಪ್ರತೀಕವಾಗಿ ಜನತಾ ಪಕ್ಷದ ಹುಟ್ಟಿಗೆ ಶ್ರಮಿಸಿದರು. ಜೆಪಿಗೆ ಹೆಗಲೆಣೆಯಾಗಿ ನಿಂತರು. ಜನತಾ ಸರ್ಕಾರ ಅಶೋಕ ಅವರಿಗಿದ್ದ ಅಧಿಕಾರ ವಿಕೇಂದ್ರೀಕರಣ, ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿನ ಬದ್ಧತೆ ಗಮನಿಸಿ, ಪಂಚಾಯತ್‌ರಾಜ್ ಪುನರುಜ್ಜೀವನಕ್ಕಾಗಿ ನೇಮಿಸಿದ್ದ ಸಮಿತಿಗೆ ಅಧ್ಯಕ್ಷರನ್ನಾಗಿ ಮಾಡಿತು. ಈ ಸಮಿತಿ ನೀಡಿದ ೧೩೨ ಶಿಫಾರಸ್ಸುಗಳನ್ನು ಒಳಗೊಂಡ ವರದಿ ಒಂದು ಐತಿಹಾಸಿಕ ಸನ್ನದಾಗಿದ್ದು ಇಂದಿನ ಪಂಚಾಯತ್ ರಾಜ್ ವ್ಯವಸ್ಥೆಗೆ ಬೆನ್ನೆಲುಬಾಗಿದೆ.

ಜನತಂತ್ರ ಹಾಗೂ ಸಮಾಜವಾದ –ಎರಡೂ ಮೌಲ್ಯಗಳಿಗೆ ಅಶೋಕರ ಬದ್ಧತೆಯೇ ಅವರು ಕೈಗೊಂಡ ಎಲ್ಲ ರಾಜಕೀಯ ತೀರ್ಮಾನಗಳಿಗೆ ತಳಪಾಯ. ತಮ್ಮನ್ನು ಕೊನೆತನಕ ಸಮಾಜವಾದದ ವಿದ್ಯಾರ್ಥಿ ಎಂದೇ ಕರೆದುಕೊಂಡ ಅಶೋಕ ಮೆಹ್ತಾ ೧೯೮೪ರ ಡಿಸೆಂಬರ್ ೧೧ರಂದು ನಿಧನರಾದರು.

–ಖಾದ್ರಿ ಎಸ್. ಅಚ್ಯುತನ್

**ಹೊಸ ಚಂದಾದಾರರಿಗೆ ಸೂಚನೆ**

**ಪತ್ರಿಕೆಗೆ ಚಂದಾದಾರರಾಗಬಯಸುವವರು (ಮಾರ್ಚ್–ಆಗಸ್ಟ್, ೨೦೧೬) ತಮ್ಮ ಚಂದಾ ಹಣವನ್ನು (ರೂ. ೧೩೦/–) ಶಿವಮೊಗ್ಗದ ಎಸ್.ಬಿ.ಎಂ.ನ (IFSC ಕೋಡ್: SBMY 0040444) ವಿನೋಬನಗರ ಶಾಖೆಯಲ್ಲಿ 'ಸಂಪಾದಕರು ಹೊಸ ಮನುಷ್ಯ' ಹೆಸರಿನಲ್ಲಿರುವ ಚಾಲ್ತಿ ಖಾತೆ ಸಂಖ್ಯೆ: 64110358330 ಇಲ್ಲಿಗೆ ವರ್ಗಾಯಿಸಿ/ಜಮಾ ಮಾಡಿ 9449242284 – ಈ ಸಂಖ್ಯೆಗೆ ಕರೆ ಮಾಡಿ ತಿಳಿಸಬೇಕು ಅಥವಾ ಸಂದೇಶ ಕಳಿಸಬಹುದು.–ಸಂ.**

ಯುವ ಸಮಾಜವಾದಿ ಚಿಂತನ ವೇದಿಕೆ

# ಗ್ರಾಮಾಂತರ ಮಕ್ಕಳಿಗೆ ಕನ್ನಡ ಭಾಷೆ ಕಲಿಸುತ್ತಾ...

-ರೋಹಿತ್. ಕೆ



ಅಪ್ಪ ಮೇಷ್ಟರಾಗಿದ್ದಕ್ಕೋ ಅಥವ ಪ್ರತಿಯೊಬ್ಬರ ಬಾಲ್ಯದಲ್ಲಿಯೂ ಮೇಷ್ಟ್ರುಗಳೇ ಮಾದರಿಯಾಗಿರುವಂತೆ ನನಗೂ ಆಗಿದ್ದರಿಂದಲೋ ಏನೋ ವೃತ್ತಿಯಿಂದ ಮೇಷ್ಟ್ರಾದೆ. ನಾನು ಕನ್ನಡ ಉಪನ್ಯಾಸಕನಾಗಿ ಎರಡು ವಿಭಿನ್ನ ಪರಿಸರದ, ಹಿನ್ನೆಲೆಯ ಮಕ್ಕಳಿಗೆ ಬೋಧಿಸುವ ಅನುಭವವನ್ನು ಪಡೆದಿರುವೆ. ಒಂದು, ಕೊಡಗು ಜಿಲ್ಲೆಯ ಒಂದು ನಗರ ಸದೃಶ ಹಳ್ಳಿ, ಮತ್ತೊಂದು ಹಾಸನ ಜಿಲ್ಲೆಯ ಹಳ್ಳಿಯಂತಿರುವ ಒಂದು ಸಣ್ಣ ಪಟ್ಟಣ. ಮೊದಲನೆಯದು ಬಹುಭಾಷಿಕ ಪ್ರದೇಶ, ಅಲ್ಲಿ ಕೊಂಚಮಟ್ಟಿಗೆ ಕನ್ನಡ ಅನಾಥ; ಎರಡನೇ ಸ್ಥಳದಲ್ಲಿ ಕನ್ನಡವೇ ಸಾರ್ವಭೌಮ ಭಾಷೆ.

ಮೇಲಿನ ಮಾಹಿತಿಯನ್ನು ಪರಾಂಬರಿಸಿ ಕೆಲವರಾದರೂ ಬಹುಭಾಷಿಕ ಪ್ರದೇಶದಲ್ಲಿ ಕನ್ನಡ ಬೋಧನೆ ಕಷ್ಟವಾಗಿಯೂ, ಕನ್ನಡವೇ ಸಾರ್ವಭೌಮ ಭಾಷೆಯಾಗಿರುವ ಜಾಗೆಯಲ್ಲಿ ಬೋಧನೆ ಸುಲಭವೂ ಆಗಿದೆಯೆಂದು ಭಾವಿಸಿದ್ದರೆ ಅದು ಶುದ್ಧ ತಪ್ಪು. ಪರಿಸ್ಥಿತಿ ವ್ಯತಿರಿಕ್ತ. ನಮ್ಮನ್ನು ಭಾಷಾ ಉಪನ್ಯಾಸಕರು ಎಂದು ಕರೆಯಲಾಗುತ್ತದೆ. ಆದರೆ ಪಠ್ಯದಲ್ಲಿ ಭಾಷೆ, ವ್ಯಾಕರಣಗಳು ಹಿಂದೆ ಸರಿದು ಸಾಹಿತ್ಯ ಮುನ್ನೆಲೆಗೆ ಬಂದು ನಿಂತಿದೆ. ಇದರ ಸರಿ-ತಪ್ಪುಗಳನ್ನು ಇಲ್ಲಿ ವಿವೇಚಿಸುವುದು ಬೇಡ. ಭಾಷೆಯನ್ನು ಆಧರಿಸಿ ಹುಟ್ಟುವ ಪ್ರಧಾನ ಉತ್ಪನ್ನವೇ ಸಾಹಿತ್ಯವಾಗಿರುವುದರಿಂದ ಹೀಗಾಗಿರಬಹುದು.

ಉಪನ್ಯಾಸಕರಾಗಿ ಕಾಲೇಜಿಗೆ ಹೋಗುವವರೆಗೆ ಬೇರೆಲ್ಲೂ ಅರೆಕಾಲಿಕ ಉಪನ್ಯಾಸಕನಾಗಿ ಕೆಲಸ ನಿರ್ವಹಿಸದಿದ್ದರಿಂದ ಹೇಗೆ ಪಾಠ ಹೇಳಬೇಕು ಎಂಬ ವಿಚಾರ ತಿಳಿಯದಿದ್ದರೂ ಏನು ಹೇಳಬೇಕು ಎಂಬುದರಲ್ಲಿ ಸ್ಪಷ್ಟತೆಯಿತ್ತು. ಓದಿಕೊಳ್ಳುವ ಚಟವಿದ್ದುದರಿಂದ ಸರಕಿಗೇನೂ ಕೊರತೆಯಿರಲಿಲ್ಲ. ಶೈಕ್ಷಣಿಕ ವರ್ಷದ ದ್ವಿತೀಯಾರ್ಧದಲ್ಲಿ ಸೇರ್ಪಡೆಯಾದ್ದರಿಂದ ಪರೀಕ್ಷೆಗೆ ಮುಗಿಸಬೇಕಾದ ಪಠ್ಯಭಾಗವನ್ನು ಮುಗಿಸಿ ಆ ವರ್ಷ ಪೂರೈಸಿದೆ. ಹೊಸ ವರ್ಷದ (ಮೇಷ್ಟ್ರುಗಳಿಗೆ ಜೂನ್ ತಿಂಗಳೇ ಹೊಸ ವರ್ಷ) ಜೂನ್ ತಿಂಗಳಿಂದ ನಿಜವಾದ ಸಮಸ್ಯೆಗಳು, ಸವಾಲುಗಳು ಇದಿರಾದವು. ಈಗಾಗಲೇ ಹೇಳಿದಂತೆ ಬಹುಭಾಷಿಕ ಪ್ರದೇಶವಾದ್ದರಿಂದ ನನ್ನ ವಿದ್ಯಾರ್ಥಿಗಳಲ್ಲಿ ಶೇಕಡಾ ೯೦ರಷ್ಟು ಮಕ್ಕಳ ಮಾತೃಭಾಷೆ (ಪರಿಸರದ ಭಾಷೆ) ಕನ್ನಡವಾಗಿರಲಿಲ್ಲ. ಕ್ರಮವಾಗಿ ಮಲೆಯಾಳ, ತಮಿಳು, ಕೊಡವ, ಬ್ಯಾರಿ ಭಾಷೆಗಳಾಗಿದ್ದವು. ಈ ನಾಲ್ಕರಲ್ಲಿ ತಮಿಳು ಹೊರತುಪಡಿಸಿ ಉಳಿದವೆಲ್ಲ ನನಗೆ ಅಪರಿಚಿತ ಭಾಷೆಗಳು.

ಇಂತಿರ್ಪ ಸಂದರ್ಭದಲ್ಲಿ ಹೊಸ ವರ್ಷವನ್ನು ವರ್ಣಮಾಲೆಯೊಂದಿಗೆ ಆರಂಭಿಸಿದೆ. ಕಾಗುಣಿತದಿಂದ ಮುಂದುವರೆಸಿದೆ. ಬಹುಭಾಷಿಕ ಪರಿಸರದ ಮಕ್ಕಳು ಕಲಿಕೆಯಲ್ಲಿ, ಆಲೋಚನೆಯಲ್ಲಿ ಮುಂದು ಎಂದು ಅಧ್ಯಯನಗಳು ಹೇಳುವುದನ್ನು ಕೇಳಿದ್ದೆ. ಅದನ್ನಿಲ್ಲಿ ಸಾಕ್ಷಾತ್ಕರಿಸಿಕೊಂಡೆ. ಮೊದಲ ವರ್ಷದಲ್ಲಿ ತನ್ನ ಹೆಸರನ್ನು 'ಅಕ್‌ಬರ್' ಎಂದು ಬರೆಯುತ್ತಿದ್ದವ ಎರಡನೇ ವರ್ಷದಲ್ಲಿ ಶೇಕಡ ೮೧ ಅಂಕಗಳೊಂದಿಗೆ ಕನ್ನಡದಲ್ಲಿ ಪಾಸಾಗಿದ್ದ. ಆ ಮಕ್ಕಳಿಗೇಕೆ ಕನ್ನಡ ಕಬ್ಬಿಣದ ಕಡಲೆಯಾಗಿತ್ತೆಂದರೆ ಅವರು ಕಾಲೇಜಿನಲ್ಲಿ, ಅದರಲ್ಲೂ ನಮ್ಮೊಂದಿಗೆ ಮಾತನಾಡುವಾಗ ಮಾತ್ರ ಕನ್ನಡ ಬಳಸುತ್ತಿದ್ದರು. ಕಾಲೇಜಿನ ಡಿಫ್ಯಾಕ್ಟೋ ಪ್ರಿನ್ಸಿಪಾಲ್ ಆಗಿದ್ದ ಮೇಡಂ ಒಬ್ಬರು ಕಾಲೇಜು ಆವರಣದಲ್ಲಿ ಕನ್ನಡದಲ್ಲಿಯೇ ಮಾತನಾಡಬೇಕೆಂದು ನಿರ್ಬಂಧಿಸುತ್ತಿದ್ದಾಗ ಅದನ್ನು ವಿರೋಧಿಸಿ ಮಲೆಯಾಳ ಪ್ರೀತಿಯ ಕನ್ನಡ ಮೇಷ್ಟ್ರು ಎಂದು ಕುಹಕಕ್ಕೀಡಾದದ್ದು ಇದೆ. ಮುಂಜಾನೆ ಪಳ್ಳಿ ಶಾಲೆಯಲ್ಲಿ ಅರಬಿ ಉರು ಹಚ್ಚಿ, ಮನೆಯಲ್ಲಿ ಮಲೆಯಾಳದಲ್ಲಿ ವ್ಯವಹರಿಸಿ ಕಾಲೇಜಿನಲ್ಲಿ ಮಾತ್ರ ಕನ್ನಡ ಬಳಸಬೇಕಾದ ಮಕ್ಕಳ ಅನಿವಾರ್ಯತೆಯನ್ನು ನಾವು ಸಾವಧಾನದಿಂದ ಅರ್ಥೈಸಿಕೊಳ್ಳಬೇಕಿತ್ತು.

ಹೀಗೆ ಆರಂಭದಲ್ಲಿ ಪಠ್ಯಕ್ಕೆ ಮಾತ್ರ ಜೋತುಬಿದ್ದು ೧೦೦% ಫಲಿತಾಂಶ ಬಂದಿದ್ದರೂ ಎಂಥದೋ ಕೊರಗು ನನ್ನಲ್ಲುಳಿದಿತ್ತು. ಪಠ್ಯ ಬಿಟ್ಟು ಒಂದು ಕನ್ನಡ ಅಕ್ಷರವನ್ನೂ ಹೆಚ್ಚಿಗೆ ಓದಲು ಅವಕಾಶವಿಲ್ಲದ ವಿದ್ಯಾರ್ಥಿಗಳಿಗೆ ಕಾಲೇಜಿನಲ್ಲಿ ಅಲಂಕಾರಕ್ಕಿದ್ದ ಗ್ರಂಥಾಲಯ ಪ್ರಯೋಜನಕ್ಕೆ ಬರುವಂತಿರಲಿಲ್ಲ. ಎಂದೂ ಒಂದು ಸಾಹಿತ್ಯ ಕೃತಿ ಓದದಿದ್ದರೂ ಆಲ್ ಇಂಡಿಯಾ ಟೂರ್ ಮಾಡುವ ಹುಚ್ಚಿದ್ದ ಪ್ರಾಂಶುಪಾಲರಿಗೆ ಗಂಟು ಬಿದ್ದು ಮಕ್ಕಳು ಓದಿ ಸಂತೋಷ ಪಡಬಹುದಾದ ಒಂದಷ್ಟು ಸರಳ ಕನ್ನಡ ಕೃತಿಗಳನ್ನು ತರಿಸಿ ಓದಲು ಹಚ್ಚಿದೆ. ಈ ಪ್ರಯತ್ನಕ್ಕೂ ಕೆಲವು ಉಪನ್ಯಾಸಕರಿಂದ ತಕರಾರು ಬಂದರೂ ಇಂಗ್ಲೀಷ್ ಹೊರತುಪಡಿಸಿ ಉಳಿದ ಐದು ವಿಷಯಗಳನ್ನು ಕನ್ನಡದ ಮೂಲಕವೇ ಅಭ್ಯಾಸ ಮಾಡುವುದರಿಂದ ಈ ಪ್ರಯೋಗದ ಲಾಭ ನಿಮಗೂ ದೊರೆಯುತ್ತದೆ ಎಂದು ಸಮಾಧಾನಿಸಿದೆ. ಪ್ರಯೋಗ ಫಲ ಕೊಟ್ಟಿತು. ಆ ವರ್ಷ ಶೇಕಡಾ ೧೦೦ರ ಫಲಿತಾಂಶದ ಜೊತೆಗೆ ಕೊಡಗು ಜಿಲ್ಲೆಗೇ ಕಲಾ ವಿಭಾಗದಲ್ಲಿ ಪ್ರಥಮ ಸ್ಥಾನ ಪಡೆದಿದ್ದು ನಮ್ಮ ಕಾಲೇಜಿನ ಹುಡುಗಿ. ಕೆಲವರು ಆಶ್ಚರ್ಯದಿಂದ ಕೇಳಿದರಂತೆ; ಆ ಊರಲ್ಲಿ ಜೂನಿಯರ್ ಕಾಲೇಜ್ ಉಂಟಾ? ಅಂತ..

ಪದವಿ ಪೂರ್ವ ಹಂತದ ಕನ್ನಡ ಭಾಷಾ ಪಠ್ಯದಲ್ಲಿ ವ್ಯಾಕರಣಾಂಶವನ್ನು ಕನಿಷ್ಠ ಮಟ್ಟಕ್ಕಿಳಿಸಿದ್ದಾರೆ. ಇರುವ ಕೆಲವು ಅಂಶಗಳು ಮಕ್ಕಳಿಗೆ ಕಠಿಣವೆನಿಸಿದಾಗ ವ್ಯಾಕರಣವೆಂಬುದನ್ನು ನಾವು ಮಾತು ಕಲಿಯುವಾಗಲೇ ಕಲಿತಿರುತ್ತೇವೆ. ಆದರೆ ಅದಕ್ಕಿರುವ ವಿಶಿಷ್ಟ ಹೆಸರುಗಳನ್ನು ಮಾತ್ರ ಈಗ ಅಭ್ಯಾಸ ಮಾಡುತ್ತೇವೆಂದು ಹೇಳಿ ಧೈರ್ಯ ತುಂಬಿ, ಕೆಲವು ಹೊಸ ಪ್ರಯೋಗಗಳೊಂದಿಗೆ ವ್ಯಾಕರಣಾಂಶಗಳನ್ನು ಕಲಿಸುವ ಪ್ರಯತ್ನ ನಡೆಸಿ ತಕ್ಕಮಟ್ಟಿಗೆ ಯಶಸ್ಸು ಗಳಿಸಿದೆ. ನನ್ನ ನಾಲ್ಕು ವರ್ಷಗಳ ಸೇವೆ ಮುಗಿಸಿ ಮೊದಲ ಕಾಲೇಜಿನಿಂದ ವರ್ಗವಾಗಿ ಬರುವ ಹೊತ್ತಿಗೆ ಕಾಲೇಜಿನ ಅರ್ಧದಷ್ಟು ಮಕ್ಕಳು ನಾಲ್ಕಾರು ಕನ್ನಡ ಪುಸ್ತಕಗಳನ್ನು ಎರವಲು ಪಡೆದು ಓದಿ, ಸಂತೋಷಿಸುವ ಹಂತಕ್ಕೆ ಬಂದಿದ್ದರು. ಆ ಮಾದರಿಯ ಅನೌಪಚಾರಿಕ ಅಭ್ಯಾಸಕ್ರಮ ನಿಜವಾಗಿಯೂ ಫಲ ನೀಡಿತ್ತು.

ಎರಡನೇ ಕಾಲೇಜು ಅಂದರೆ ಕನ್ನಡ ಸಾರ್ವಭೌಮ ಭಾಷೆಯಾಗಿರುವ ಪ್ರದೇಶದ ಕಾಲೇಜು ಕೊಂಚ ದೊಡ್ಡದು. ಸಾವಿರದವರೆಗೆ ವಿದ್ಯಾರ್ಥಿಗಳು. ನಾಲ್ಕೇ ದಿನಕ್ಕೆ ಅರ್ಥವಾದ ಸಂಗತಿ: ಇಲ್ಲಿಯೂ ವರ್ಣಮಾಲೆಯಿಂದಲೇ ಆರಂಭಿಸಬೇಕು. ಆರಂಭಿಸಿದೆ, ಆದರೆ ಹಿಂದಿನ ಪ್ರಯೋಗದಲ್ಲಿ ಸಿಕ್ಕ ಫಲ ದೊರೆಯಲಿಲ್ಲ. ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯದ ಮೇಲೆ ಅವರು ಬೆಳೆದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ, ಹಿಂದೆ ಅಭ್ಯಾಸ ಮಾಡಿದ ಶಾಲೆ, ಅಲ್ಲಿಂದ ದಬ್ಬಿಸಿಕೊಂಡು ಬಂದ ರೀತಿ ಎಲ್ಲವೂ ತನ್ನದೇ ಪಾತ್ರ ವಹಿಸುತ್ತವೆ ಎಂಬುದು ಬಹಳ ಬೇಗ ಅರ್ಥವಾಗಿತ್ತು. ಕಾಲೇಜಿನ ಸೌಲಭ್ಯಗಳು ಮತ್ತು ಅವಧಿ ಹಾಗೂ ಪಿ.ಯು. ಹಂತದಲ್ಲಿಯೇ ಅರ್ಧ ದಿನ ದುಡಿಯುವ ಕಷ್ಟ ಸಹಿಷ್ಣುವಾದ ವಿದ್ಯಾರ್ಥಿಗಳು ಕಲಿಕೆಯಲ್ಲಿ ಹಿಂದಿರುವುದು ಸಿಟ್ಟಿಗಿಂತ ಹೆಚ್ಚಾಗಿ ಬೇಸರ ಮೂಡಿಸಿತು. ದೇಶ ಸ್ವಾತಂತ್ರ್ಯ ಗಳಿಸಿ ಇಷ್ಟು ದಶಕಗಳಾದರೂ ಉಚಿತ ಮತ್ತು ಗುಣಮಟ್ಟದ ಶಿಕ್ಷಣ ಒದಗಿಸಲಾರದ ಬರಡು ಸ್ಥಿತಿ ಆತಂಕಕ್ಕೆ ಕಾರಣವಾಗುತ್ತದೆ. ಪ್ರಸ್ತುತ ಕಾಲೇಜಿನಲ್ಲಿ ಹಳೆಯ ಹಳ್ಳಿ ಕಾಲೇಜಿಗಿಂತ ಹೆಚ್ಚೇ ಸೌಲಭ್ಯಗಳಿದ್ದವು. ಲಭ್ಯವಿರುವ ಪ್ರೊಜೆಕ್ಟರ್ ಬಳಸಿ ಪಠ್ಯದಲ್ಲಿರುವ ಲೇಖಕರ ಕುರಿತ ಸಾಕ್ಷ್ಯಚಿತ್ರಗಳನ್ನು ತೋರಿಸುವ ಪ್ರಯತ್ನ ನಡೆಸಿದೆ.

ನನ್ನ ಉತ್ಸಾಹಕ್ಕೆ ಇಂಬು ಕೊಟ್ಟು ಪ್ರಾಂಶುಪಾಲರು ಹಾಗೂ ಉಪನ್ಯಾಸಕರೊಂದಿಗೆ ಸೇರಿ ಸುಮಾರು ೫೦೦ ಕೃತಿಗಳ ಕನ್ನಡ ಪುಸ್ತಕಗಳಿಗೆ ಮೀಸಲಾದ 'ಕನ್ನಡ ಪುಸ್ತಕ ಮನೆ' ಎಂಬ ಗ್ರಂಥಾಲಯವನ್ನೆ ಮಾಡಿದೆವು. ಮೊದಮೊದಲು ಬಲವಂತದಿಂದ ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನು

(೯ನೇ ಪುಟಕ್ಕೆ

# ಉನ್ನತ ಶಿಕ್ಷಣ - ಸವಾಲು ಮತ್ತು ಸಾಧ್ಯತೆಗಳು

– ಪ್ರೊ. ಎಂ.ಜಿ.ಚಂದ್ರಶೇಖರಯ್ಯ

**ದೇಶದಲ್ಲಿ ಪ್ರತಿವರ್ಷ ಹೊಸಹೊಸ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗುತ್ತಿದ್ದರೂ ಅವು ಗುಣಮಟ್ಟದ ಶಿಕ್ಷಣ ನೀಡಲು ವಿಫಲವಾಗಿವೆ. ಮುಖ್ಯವಾಗಿ ವ್ಯಾಪಕ ಅಧ್ಯಯನ ಮತ್ತು ಹೊಸ ಜ್ಞಾನಸೃಷ್ಟಿ ಅಥವಾ ಜನಪರವಾದ ಸಂಶೋಧನೆಗಳು ಅಪೇಕ್ಷಿತ ಮಟ್ಟದಲ್ಲಿ ನಡೆಯದಿರುವುದರಿಂದ ಉನ್ನತ ಶಿಕ್ಷಣಕ್ಷೇತ್ರ ಬಡವಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಎಷ್ಟೋ ವಿಷಯಗಳನ್ನು ಚೆನ್ನಾಗಿ ಕಲಿಸುವ ವಿದ್ವಾಂಸರು ಹಾಗೂ ಹೊಸ ಹೊಸ ಸಂಶೋಧನೆಗೆ ಸೂಕ್ತ ಮಾರ್ಗ ದರ್ಶನ ನೀಡಬಲ್ಲ ಸಮರ್ಥರಾದ ಮಾರ್ಗದರ್ಶಕರ ಕೊರತೆಯಿಂದ ಉನ್ನತ ಶಿಕ್ಷಣ ಕ್ಷೇತ್ರವು ಬೌದ್ಧಿಕ ದಾರಿದ್ರ್ಯದಲ್ಲಿ ನರಳುತ್ತಿದೆ. ರಾಜಕೀಯ ಹಸ್ತಕ್ಷೇಪ, ಜಾತಿ ರಾಜಕಾರಣ, ಭ್ರಷ್ಟಾಚಾರ, ಲೈಂಗಿಕ ಹಗರಣ ಮುಂತಾದ ಮಾರಕ ಸಂಗತಿಗಳಿಂದ ಹಲವು ವಿಶ್ವವಿದ್ಯಾಲಯಗಳು ಕುಖ್ಯಾತಿ ಪಡೆದಿವೆ. ಈ ಪರಿಸ್ಥಿತಿಗೆ ಉನ್ನತ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದವರೆಲ್ಲ ಸಮಾನ ಹೊಣೆಗಾರರಾಗಿರುತ್ತಾರೆ. ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವ ಬೋಧಕರ ಸಂಬಳ-ಸಾರಿಗೆ-ಸೌಲಭ್ಯಗಳು ಹೆಚ್ಚಿವೆಯೇ ಹೊರತು, ಬೋಧನೆ, ಅಧ್ಯಯನ, ವಿದ್ವತ್ತು, ಕಲಿಸುವ ಪ್ರೀತಿ-ಬದ್ಧತೆಗಳಲ್ಲ.**



ನಮ್ಮ ಉನ್ನತ ಶಿಕ್ಷಣವು ಪರಿವರ್ತನೆಯ ಹಾದಿಯಲ್ಲಿದ್ದು, ಅದರ ಸದ್ಯದ ಸ್ಥಿತಿ-ಸ್ವರೂಪ ಕುರಿತು ಅನೇಕ ಆಕ್ಷೇಪಗಳು ವ್ಯಕ್ತವಾಗಿವೆ. ಹಾಗೂ ಅದು ವರ್ತಮಾನದ ಅಗತ್ಯಗಳನ್ನು ಪೂರೈಸಲು ವಿಫಲವಾಗಿರುವುದಷ್ಟೇ ಅಲ್ಲ, ಸವಕಲು ನಾಣ್ಯವಾಗಿದ್ದು ಪ್ರಸ್ತುತತೆಯನ್ನು ಕಳೆದುಕೊಂಡಿದೆ ಎಂಬ ಗಂಭೀರ ಆರೋಪಗಳನ್ನು ಎದುರಿಸುತ್ತಿದೆ. ಈ ಹಿನ್ನೆಲೆಯಲ್ಲಿ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸಲು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವವರು ಮತ್ತು ಶಿಕ್ಷಣತಜ್ಞರಿಂದ ಅಭಿಪ್ರಾಯ ಸಂಗ್ರಹ ಮಾಡುತ್ತಿದೆ. ಉನ್ನತ ಶಿಕ್ಷಣವನ್ನು ವರ್ತಮಾನಕ್ಕೆ ಸಲ್ಲುವಂತೆ ಪರಿಷ್ಕರಿಸಿ ಹೊಸ ನೀತಿ ರೂಪಿಸುತ್ತಿರುವಾಗ ಅದಕ್ಕೆ ಯಾವುದಾದರೊಂದು ಮಾದರಿ ಇರಬೇಕೇ? ಇರಬೇಕೆಂದಾದರೆ ಆ ಮಾದರಿ ಯಾವುದಾಗಿರಬೇಕು, ಹೇಗಿರಬೇಕು? ಹೊಸ ಮಾದರಿಯೊಂದನ್ನು – ಯಾವುದು ಭಾರತದ ಸಾಂಸ್ಕೃತಿಕ ಬಹುತ್ವಕ್ಕೆ ಧಕ್ಕೆಯಾಗದಂತೆ ಅರ್ಥಪೂರ್ಣವಾಗಿ ಒಗ್ಗುವುದೋ ಅಂತಹ ಮಾದರಿಯನ್ನು ನಾವೇ ರೂಪಿಸಿಕೊಳ್ಳಬೇಕೇ? – ಎಂಬ ಪ್ರಶ್ನೆಗಳು ನಮ್ಮ ಎದುರಿಗೆ ಇವೆ. ಈ ನಡುವೆ ಭಾರತದ ಉನ್ನತ ಶಿಕ್ಷಣವು ಅಂತರಾಷ್ಟ್ರೀಯ ಗುಣಮಟ್ಟಕ್ಕಿಂತ ತುಂಬ ಹಿಂದೆ ಉಳಿದಿದೆ – ಮಾತ್ರವಲ್ಲ, ಅದು ಅಸಂಗತವೂ ಆಗಿದೆ ಎಂಬ ಗಂಭೀರ ಆಕ್ಷೇಪಕ್ಕೆ ಗುರಿಯಾಗಿದೆ. ಅಂತರಾಷ್ಟ್ರೀಯ ಗುಣಮಟ್ಟಕ್ಕೆ ಭಾರತದ ಉನ್ನತ ಶಿಕ್ಷಣವನ್ನು ಕೊಂಡೊಯ್ಯಬೇಕು ಎಂಬ ವಾದವನ್ನು ಒಪ್ಪಬಹುದಾದರೂ ಆ ಗುಣಮಟ್ಟವನ್ನು ಮುಟ್ಟುವಂತಹ ಉನ್ನತ ಶಿಕ್ಷಣದ ನೀತಿನಿರೂಪಣೆಯು ಪಶ್ಚಿಮ ರಾಷ್ಟ್ರಗಳಿಂದ ಆಮದು ಮಾಡಿಕೊಂಡ ಯಾವುದೋ ಮಾದರಿಯನ್ನು ಕಣ್ಮುಚ್ಚಿ ಅನುಕರಿಸುವುದರಿಂದ ಸಿದ್ಧವಾಗಬಾರದು. ಜಗತ್ತಿನ ಶ್ರೇಷ್ಠ ಶಿಕ್ಷಣ ಮಾದರಿಗಳ ಅವಲೋಕನ, ಅಧ್ಯಯನದಿಂದ ನಮ್ಮ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬಹುದು. ಆ ತಿಳಿವಳಿಕೆಯ ಬೆಳಕಿನಲ್ಲಿ ಭಾರತದ ಸಾಂಸ್ಕೃತಿಕ ಬಹುತ್ವ, ಸಾಮಾಜಿಕ ಮತ್ತು ಮುಖ್ಯವಾಗಿ ಪ್ರಜಾಪ್ರಭುತ್ವದ ನಿರೀಕ್ಷೆಗಳನ್ನು ಹುಸಿಗೊಳಿಸದ ಹೊಸ ಶಿಕ್ಷಣ ನೀತಿಯನ್ನು ನಾವಿಂದು ರೂಪಿಸಿಕೊಳ್ಳಬೇಕಾಗಿದೆ.

ಹೊಸ ಶಿಕ್ಷಣ ನೀತಿಯನ್ನು ಈಗ ರೂಪಿಸುವ ಅಗತ್ಯವೇನಿತ್ತು ಎಂಬುದಕ್ಕಿಂತ, ಆ ಶಿಕ್ಷಣ ನೀತಿಯನ್ನು ಯಾರು ರೂಪಿಸಲು ಹೊರಟಿದ್ದಾರೆ, ಅದರ ಹಿನ್ನಲೆಯೇನು? ಎಂಬುದನ್ನು ಗಮನಿಸಬೇಕು. ಯು.ಪಿ.ಎ ಸರ್ಕಾರದ ಅವಧಿಯಲ್ಲಿ ಒಮ್ಮೆ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸಲಾಗಿತ್ತು. ಆದರೆ ಈಗ ಬದಲಾದ ರಾಜಕೀಯ ಸನ್ನಿವೇಶದಲ್ಲಿ ಕೇಂದ್ರದಲ್ಲಿ ಅಧಿಕಾರದಲ್ಲಿರುವ ಪಕ್ಷವು ತನ್ನ ಸಿದ್ಧಾಂತಕ್ಕೆ ಒಪ್ಪುವ ಮತ್ತು ತನ್ನ ಕಾರ್ಯಸೂಚಿಗೆ ಅನುಗುಣವಾದ ಹೊಸ ಶಿಕ್ಷಣ ನೀತಿಯನ್ನು ತರಲು ಮುಂದಾಗಿದೆ. ಹೊಸ ಶಿಕ್ಷಣ ನೀತಿ-ಪ್ರಾಥಮಿಕ ಅಥವಾ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ ನೀತಿಯು ಅಧಿಕಾರದಲ್ಲಿರುವ ರಾಜಕೀಯ ಪಕ್ಷದ ತತ್ವಸಿದ್ಧಾಂತಗಳನ್ನು ಮೀರಿ, ಒಟ್ಟು ರಾಷ್ಟ್ರದ ಹಿತದೃಷ್ಟಿ ಮತ್ತು ಶೈಕ್ಷಣಿಕ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು ರೂಪುಗೊಳ್ಳಬೇಕು. ಶಿಕ್ಷಣ ನೀತಿಯು ಎಂದೂ ಅಧಿಕಾರದಲ್ಲಿರುವ ಪಕ್ಷದ ಗುಪ್ತಕಾರ್ಯಸೂಚಿಗೆ ಅನುಗುಣವಾಗಿ ಸಿದ್ಧಗೊಳ್ಳಬಾರದು. ಪಠ್ಯಕ್ರಮ ಮತ್ತು ಪಠ್ಯ ಪುಸ್ತಕಗಳು ಕೂಡ ಪಕ್ಷಾತೀತವಾಗಿಯೇ ಆಯ್ಕೆಗೊಳ್ಳಬೇಕು. ಸರ್ಕಾರದಿಂದ ನಿಯೋಜನೆಗೊಳ್ಳುವ ಕೆಲವರು ಅವಕಾಶವಾದಿಗಳೂ ಪಕ್ಷಪಾತಿಗಳೂ ಆದ ವಿದ್ವಾಂಸರು ರೂಪಿಸಿದ ಪಠ್ಯಕ್ರಮ, ಪಠ್ಯಪುಸ್ತಕಗಳಿಂದ ಇಡೀ ಶಿಕ್ಷಣ ವ್ಯವಸ್ಥೆಯೇ ದುರ್ಬಲಗೊಳ್ಳುವುದು. ಎಡಪಂಥೀಯರು ಅಥವಾ ಬಲಪಂಥೀಯರು ಯಾರೇ ಆಗಿರಲಿ ಅವರ ಪೂರ್ವಗ್ರಹೀತ ರಾಜಕೀಯ ನಿಲವುಗಳು ಶಿಕ್ಷಣನೀತಿ, ಪಠ್ಯಕ್ರಮ ರೂಪಿಸುವಲ್ಲಿ ಅಡ್ಡಿಯಾಗಬಾರದು. ಹೀಗಾಗಿ ರಾಜಕೀಯ ಪಕ್ಷದ ತತ್ವಸಿದ್ಧಾಂತಗಳು, ಗುಪ್ತಕಾರ್ಯಸೂಚಿ ಯಾರದೇ ಆಗಿರಲಿ ಅದರಿಂದ ಶಿಕ್ಷಣ ವ್ಯವಸ್ಥೆ ದುರ್ಬಲಗೊಳ್ಳುವುದು ಹಾಗೂ ರಾಜಕೀಯ ಗುಪ್ತಕಾರ್ಯಸೂಚಿ ಆಗಿರಲಿ ಅದು ಅಪಾಯಕರ. ಏಕೆಂದರೆ ಕಣ್ಣೆದುರಿನ ಶತ್ರುವಿನ ವಿರುದ್ಧ ಹೋರಾಡುವುದು ಸುಲಭಸಾಧ್ಯ; ಅಗೋಚರ ಮಾಯಾಶತ್ರುವಿನ ವಿರುದ್ಧದ ಹೋರಾಟ ಸೋಲಿನಲ್ಲಿ ಪರ್ಯವಸಾನಗೊಳ್ಳುವುದು. ಅಲ್ಲದೆ ಗುಪ್ತಕಾರ್ಯಸೂಚಿಯು ಪ್ರಜಾತಂತ್ರ ವ್ಯವಸ್ಥೆಗೆ ಒಲ್ಲದ, ಬಗ್ಗದ ವಿಚಾರ. ಪ್ರಜಾತಂತ್ರ ವ್ಯವಸ್ಥೆ ಯಾವತ್ತೂ ಪಾರದರ್ಶಕವಾಗಿರಬೇಕು. ಆದ್ದರಿಂದ, ವಿಶಾಲ ತಳಹದಿಯ ಮೇಲೆ ನಿಂತ, 'ಪಕ್ಷ'ಪಾತದ ಸಂಕುಚಿತ ರಾಜಕೀಯ ಸಿದ್ಧಾಂತಗಳಿಗೆ ಹೊರತಾದ ವರ್ತಮಾನದ ಅಗತ್ಯ ಮತ್ತು ದೂರದೃಷ್ಟಿಯಿಂದ ಕೂಡಿದ ಬಹುರೂಪಿ ಸಂಸ್ಕೃತಿಯ ಸ್ಪಂದನೆಯುಳ್ಳ ಹೊಸ ಶಿಕ್ಷಣ ನೀತಿಯನ್ನು ರೂಪಿಸುವಂತೆ ಶಿಕ್ಷಣತಜ್ಞರು ಮತ್ತು ಶಿಕ್ಷಣ ಪ್ರೇಮಿಗಳು ಸರ್ಕಾರವನ್ನು ಒತ್ತಾಯಿಸಬೇಕಾಗಿದೆ.

ಭಾರತದ ಉನ್ನತ ಶಿಕ್ಷಣದ ಸ್ಥಿತಿಗತಿ ಅರಿಯಲು ಕರ್ನಾಟಕದ ಉದಾಹರಣೆಯನ್ನು ಇಟ್ಟುಕೊಂಡು ವಿವರಿಸಿದರೆ ವಸ್ತುಸ್ಥಿತಿಗೆ ಹತ್ತಿರವಾದ ಸ್ಪಷ್ಟ ಚಿತ್ರಣ ಮೂಡುವುದು. ಕರ್ನಾಟಕದಲ್ಲಿ ಸ್ವಾತಂತ್ರ್ಯಪೂರ್ವಕಾಲದಿಂದಲೂ ಉನ್ನತ ಶಿಕ್ಷಣವು ಸರ್ಕಾರದ ಹಿಡಿತದಲ್ಲಿಯೇ ಇದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಚಿತ್ರ ಸಂಪೂರ್ಣ ಬದಲಾಗಿದ್ದು, ಹೆಚ್ಚಿನ ಸ್ನಾತಕ ಪದವಿ ಕಾಲೇಜುಗಳು ಸರ್ಕಾರಕ್ಕಿಂತ ಖಾಸಗಿಯವರ ಕೈಯಲ್ಲಿಯೇ ಇವೆ. ಕಳೆದೊಂದು ದಶಕದಿಂದೀಚೆಗೆ ರಾಜ್ಯಸರ್ಕಾರ ಹಲವು ಹೊಸ ವಿಶ್ವವಿದ್ಯಾಲಯಗಳನ್ನು ತೆರೆದಿದ್ದರೂ ಅದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಖಾಸಗಿ ವಿಶ್ವವಿದ್ಯಾಲಯಗಳೂ ತಲೆ ಎತ್ತಿವೆ. ಈಚಿನ ವರ್ಷಗಳಲ್ಲಿ ಸರ್ಕಾರವು ಉನ್ನತ ಶಿಕ್ಷಣದ ಜವಾಬ್ದಾರಿಯಿಂದ ನುಣುಚಿಕೊಳ್ಳುತ್ತ ಶಿಕ್ಷಣದ ಖಾಸಗೀಕರಣದ ಹಾದಿಯನ್ನು ಮುಕ್ತಗೊಳಿಸಿದೆ. ಈ ಖಾಸಗಿ ಪದವಿ

ಹೆಚ್ಚಿನ ಲಾಭ ತರುವ ಹೊಸ ಹೊಸ ಮೂಲವಿಜ್ಞಾನ ಪದವಿ ಕೋರ್ಸ್‌ಗಳನ್ನು ಮಾತ್ರ ಆರಂಭಿಸುತ್ತಿವೆ. ಹಾಗೂ ಮೂಲ ವಿಜ್ಞಾನ (Pure science), ಕಲೆ, ಮಾನವಿಕ ವಿಷಯಗಳನ್ನೊಳಗೊಂಡ ಸಾಂಪ್ರದಾಯಿಕ ಪದವಿ ಕೋರ್ಸ್‌ಗಳನ್ನು ನಿರ್ಲಕ್ಷಿಸುತ್ತಿವೆ. ಈ ಖಾಸಗಿ ಕಾಲೇಜುಗಳು ಮತ್ತು ಖಾಸಗಿ ವಿಶ್ವವಿದ್ಯಾಲಯಗಳಿಗೆ ಸೇರುವ ಹೆಚ್ಚಿನ ವಿದ್ಯಾರ್ಥಿಗಳು ಶ್ರೀಮಂತರು ಹಾಗೂ ಹೊರರಾಜ್ಯ ಮತ್ತು ಹೊರದೇಶಗಳಿಂದ ಬಂದವರು ಎಂಬುವುದು ಗಮನಾರ್ಹ ಸಂಗತಿ. ಖಾಸಗಿ ಕಾಲೇಜುಗಳು ಮೂಲವಿಜ್ಞಾನ, ಕಲೆ, ಮಾನವಿಕ ವಿಷಯಗಳನ್ನು ನಿರ್ಲಕ್ಷಿಸುತ್ತಿರುವುದು ಹಾಗೂ ಪ್ರತಿಭಾವಂತ ವಿದ್ಯಾರ್ಥಿಗಳು ಈ ಸಾಂಪ್ರದಾಯಿಕ ಪದವಿಕೋರ್ಸ್‌ಗಳನ್ನು ಆಯ್ಕೆ ಮಾಡಿಕೊಳ್ಳದಿರುವುದು ಶಿಕ್ಷಣದ ಪ್ರಗತಿಯ ದೃಷ್ಟಿಯಿಂದ ಆರೋಗ್ಯಕರ ಬೆಳವಣಿಗೆಯಲ್ಲ. ಸದ್ಯದ ಈ ಪರಿಸ್ಥಿತಿಯೇ ಮುಂದುವರಿದರೆ ಪ್ರಾಥಮಿಕ, ಪ್ರೌಢ ಮತ್ತು ಪದವಿ ಪೂರ್ವ ಹಂತಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ವಿಜ್ಞಾನ, ಕಲೆ, ಮಾನವಿಕ ವಿಷಯಗಳನ್ನು ಸಮರ್ಥವಾಗಿ, ಪರಿಣಾಮಕಾರಿಯಾಗಿ ಬೋಧಿಸಲು/ಕಲಿಸಲು ಶಕ್ತರಾದ ಉಪನ್ಯಾಸಕರು ದೊರಕುವುದು ದುಸ್ತರವಾಗುವುದು. ಪ್ರತಿಭಾವಂತ ವಿದ್ಯಾರ್ಥಿಗಳು ಹೆಚ್ಚಿನವರು ತಾಂತ್ರಿಕ, ವೈದ್ಯಕೀಯ ಮುಂತಾದ ವೃತ್ತಿಪರ ಕೋರ್ಸ್‌ಗಳನ್ನು ಮಾತ್ರ ಆಯ್ಕೆ ಮಾಡುತ್ತಿರುವುದು, ಆ ಪ್ರವೃತ್ತಿಯನ್ನು ಪೋಷಿಸುವಂತಹ ವಾತಾವರಣ ನಿರ್ಮಾಣವಾಗಿರುವುದು ಉನ್ನತ ಶಿಕ್ಷಣ– ಮುಖ್ಯವಾಗಿ ಮೂಲವಿಜ್ಞಾನ, ಕಲೆ, ಮಾನವಿಕ ವಿಷಯಗಳ ಅಧ್ಯಯನವು ನಿರ್ಲಕ್ಷ್ಯಕ್ಕೊಳಗಾಗಲು ಮುಖ್ಯ ಕಾರಣವಾಗಿದೆ. ಈ ಬೆಳವಣಿಗೆಯು ಮುಂದಿನ ದಿನಗಳಲ್ಲಿ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಗಂಭೀರ ಪರಿಣಾಮನ್ನುಂಟು ಮಾಡುವುದು.

ಮೂಲವಿಜ್ಞಾನ, ಕಲೆ, ಮಾನವಿಕ ವಿಷಯಗಳು ನಿರ್ಲಕ್ಷ್ಯಕ್ಕೊಳಗಾಗುತ್ತಿರುವುದಕ್ಕೆ ಕೇವಲ ವಿದ್ಯಾರ್ಥಿಗಳನ್ನು ಮಾತ್ರ ಹೊಣೆಗಾರರನ್ನಾಗಿ ಮಾಡುವುದು ಸೂಕ್ತವೇ? ಕಲೆ, ವಿಜ್ಞಾನ, ಮಾನವಿಕ ವಿಷಯಗಳನ್ನು ಕಾಲಕಾಲಕ್ಕೆ ಅಗತ್ಯ ಮತ್ತು ಅನುಕೂಲಕ್ಕೆ ತಕ್ಕಂತೆ ಉನ್ನತೀಕರಿಸುವ, ಪರಿಷ್ಕರಿಸುವ ಕಾರ್ಯ ಏಕೆ ನಡೆದಿಲ್ಲ? ಸಾಂಪ್ರದಾಯಿಕ ಪದವಿ ಪಡೆದವರು ಹೆಚ್ಚಿನವರು ನಿರುದ್ಯೋಗಿಗಳಾಗುತ್ತಿರುವುದು ಏಕೆ? ಮುಖ್ಯವಾಗಿ ಕಲೆ, ವಿಜ್ಞಾನ, ಮಾನವಿಕ ವಿಷಯಗಳ ಬೋಧನೆಯಲ್ಲಿ ಇರುವ ಕೊರತೆಗಳೇನು? ಈ ವಿಷಯಗಳು ಮತ್ತು ಅವುಗಳ ಬೋಧನೆಯನ್ನು ಹೇಗೆ ಪ್ರಸ್ತುತಗೊಳಿಸುವುದು? ಎಂಬ ಬಗ್ಗೆ ತುರ್ತಾಗಿ ಚಿಂತನ–ಮಂಥನ ನಡೆಯಬೇಕು.

ಇನ್ನೊಂದು ಮುಖ್ಯ ವಿಷಯವನ್ನು ಇಲ್ಲಿಯೇ ಪ್ರಸ್ತಾಪಿಸಬೇಕು: ಇಂದು ಪದವಿ ಹಂತದಲ್ಲಿ ಕಲೆ ಮತ್ತು ಮಾನವಿಕ ವಿಷಯಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳುತ್ತಿರುವ ಹೆಚ್ಚಿನ ವಿದ್ಯಾರ್ಥಿಗಳು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದ ಜಾತಿ, ಸಮುದಾಯ ವರ್ಗಗಳಿಗೆ ಸೇರಿದವರು. ಇವರಲ್ಲಿ ಶೇಕಡ ಎಂಬತ್ತು ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದಿಂದ ಬಂದವರು ಹಾಗೂ ಮೊದಲ ತಲೆಮಾರಿನ ಪದವಿ ಆಕಾಂಕ್ಷಿಗಳು. ವಿಜ್ಞಾನ ವಿಷಯದಲ್ಲಿ ಪದವಿ ಪಡೆಯಲು ಬಯಸುವವರು ಕೂಡ ತಾಂತ್ರಿಕ–ವೈದ್ಯಕೀಯ ಕೋರ್ಸ್‌ಗಳಿಗೆ ಪ್ರವೇಶ ಪಡೆಯಲು ವಿಫಲರಾದವರು– ಇಲ್ಲವೆ ಪಿ.ಯು.ಸಿ. ಯಲ್ಲಿ ನಪಾಸಾಗಿ ಮತ್ತೆ ಮತ್ತೆ ಪ್ರಯತ್ನಿಸಿ ಆ ಹಂತ ದಾಟಿ ಬಂದವರು. ಮೂಲವಿಜ್ಞಾನದಲ್ಲಿ ಪದವಿ ಪಡೆಯಬೇಕು ಎಂಬ ಇಚ್ಛೆಯಿಂದ ಆಯ್ಕೆ ಮಾಡಿಕೊಳ್ಳುವವರು ವಿರಳ. ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳಲ್ಲಿ ಪದವಿ ಪಡೆಯಲು ಬಯಸುತ್ತಿರುವವರಲ್ಲಿ ಶೇಕಡ ಎಂಬತ್ತು ವಿದ್ಯಾರ್ಥಿಗಳು ನಗರ ಪ್ರದೇಶದಿಂದ ಬಂದವರು; ಆರ್ಥಿಕವಾಗಿ ಉತ್ತಮ ಮಟ್ಟದಲ್ಲಿರುವವರು. ಹೀಗಾಗಿ ಉನ್ನತ ಶಿಕ್ಷಣ ಬಯಸುವ ವಿದ್ಯಾರ್ಥಿಗಳ ಸಾಮಾಜಿಕ, ಆರ್ಥಿಕ ಮತ್ತು ಪ್ರಾದೇಶಿಕ ಸಂಗತಿಗಳು ಅವರು ಆಯ್ಕೆ ಮಾಡಿಕೊಳ್ಳುವ ಪದವಿ ಕೋರ್ಸ್‌ಗಳನ್ನು ನಿರ್ಧರಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ. ಈ ಎಲ್ಲ ಸಂಗತಿಗಳನ್ನು ಪರಿಗಣಿಸದೆ ಉನ್ನತ ಶಿಕ್ಷಣಕ್ಕೆ ಹೊಸ ನೀತಿಯೊಂದನ್ನು ರೂಪಿಸುವುದು ಅರ್ಥಪೂರ್ಣವೆನಿಸದು.

ಕಲೆ, ಮಾನವಿಕ, ವಿಜ್ಞಾನ, ವಾಣಿಜ್ಯ ಪಠ್ಯಕ್ರಮ ಕುರಿತು ಎರಡು ಮಾತು ಹೇಳಬೇಕು. ವಾಣಿಜ್ಯ ವಿಷಯದ ಪಠ್ಯಕ್ರಮ ಸಾಕಷ್ಟು ಸುಧಾರಿಸಿದಂತಿದೆ. ಈ ಮಾತನ್ನು ವಿಜ್ಞಾನ ವಿಷಯದಲ್ಲಿ ಹೇಳುವುದು ಕಷ್ಟ. ಮುಖ್ಯವಾಗಿ ಭಾಷಾ ತರಗತಿಗಳನ್ನು ವಿದ್ಯಾರ್ಥಿಗಳು ಗಂಭೀರವಾಗಿ ಪರಿಗಣಿಸಬೇಕು. ಭಾಷೆಯನ್ನು ಚೆನ್ನಾಗಿ ಕಲಿಯದೆ ಉನ್ನತ ಶಿಕ್ಷಣದ ಹಂತದಲ್ಲಿ ಯಾವುದೇ ವಿಷಯದಲ್ಲಿ ಜ್ಞಾನಾರ್ಜನೆ ಸಾಧ್ಯವಾಗದು. ಭಾಷಾ ತರಗತಿಗಳು ಮನರಂಜನೆ ನೀಡುವ, ಮನಸ್ಸನ್ನು ಲಘು ಹಾಸ್ಯದಲ್ಲಿ ತೇಲಿಸುವ ವೇಳೆಯಾಗಬಾರದು. ಹಾಗೆಯೇ ಸಾಹಿತ್ಯದ ಪಠ್ಯಕ್ರಮದಲ್ಲಿ ಮುಖ್ಯ ಬದಲಾವಣೆ ಅಗತ್ಯವಿದೆ: ನಮ್ಮ ವಿದ್ಯಾರ್ಥಿಗಳಿಗೆ ಶೇಕ್ಸ್‌ಪಿಯರ್, ವರ್ಡ್ಸ್‌ವರ್ಥ್, ಟಾಲ್‌ಸ್ಟಾಯ್ ಮುಂತಾದವರು ಪರಿಚಯಿಸಲ್ಪಡುತ್ತಾರೆ. ಆದರೆ ಅವರಿಗೆ ನಮ್ಮ ದೇಶ ಭಾಷೆಗಳಲ್ಲಿ ಅತ್ಯಂತ ಶ್ರೇಷ್ಠ ಲೇಖಕರೆನಿಸಿದ ವೈಕಂ ಬಷೀರ್, ಶ್ರೀ ಶ್ರೀ, ಜಯಕಾಂತನ್, ಪ್ರೇಮ್‌ಚಂದ್, ಶರಶ್ಚಂದ್ರ, ಫಣೀಂದ್ರನಾಥರೇಣು, ಮುಂತಾದವರು ತಿಳಿದಿರುವುದಿಲ್ಲ. ಯುರೋಪಿನ ಇತಿಹಾಸ, ಭಾರತದ ಇತಿಹಾಸ ಓದುವ ವಿದ್ಯಾರ್ಥಿಗಳಿಗೆ ತಮ್ಮ ಜಿಲ್ಲೆ ತಾಲ್ಲೂಕಿನ ಇತಿಹಾಸ ತಿಳಿದಿರುವುದಿಲ್ಲ. ಅರ್ಥಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರಗಳೂ ಹೀಗೆ ಭಾರತೀಕರಣಗೊಳ್ಳಬೇಕಾದ ಅಗತ್ಯವಿದೆ. ಭಾರತದ ಸಂಕೀರ್ಣ ಸಮಾಜೋ–ಆರ್ಥಿಕ ವ್ಯವಸ್ಥೆಯನ್ನು ಸೂಕ್ಷ್ಮತೆ ಮತ್ತು ಸಹನೆಯಿಂದ ಅರ್ಥಮಾಡಿಸಬೇಕು. ಪಠ್ಯಕ್ರಮದ ಲೋಪದಿಂದ Macro level ನಲ್ಲಿ ಏನೋ ಕಲಿತಿದ್ದೇವೆ ಎಂಬ ಅಮೂರ್ತ ಭಾವನೆ ವಿದ್ಯಾರ್ಥಿಗಳಲ್ಲಿರುವುದು ಅಷ್ಟೇ ಹೊರತು, Micro level ನಲ್ಲಿ ನಿರ್ದಿಷ್ಟವಾಗಿ ಕಲಿತಾಗ ಮೂಡುವ ಸ್ಪಷ್ಟತೆ ಇರುವುದಿಲ್ಲ. ಈ ಬಗ್ಗೆ ಉನ್ನತ ಶಿಕ್ಷಣ ನೀತಿ ನಿರೂಪಣೆ ಮಾಡುವಾಗ ಗಮನ ಕೊಡಬೇಕು.

ಪ್ರಸ್ತುತ ಕಾಲ ಸಂದರ್ಭದಲ್ಲಿ ವಿವಾದಾಸ್ಪದವಾಗಬಹುದಾದ ಪ್ರಶ್ನೆಯೊಂದನ್ನು ಇಲ್ಲಿ ಕೇಳ ಬಯಸುತ್ತೇನೆ: ದೇಶದ ಎಲ್ಲಾ ಯುವಕರು ಉನ್ನತ ಶಿಕ್ಷಣ ಪಡೆಯಬೇಕೆ? ಎಲ್ಲರಿಗೂ ಉನ್ನತ ಶಿಕ್ಷಣದ ಅಗತ್ಯವಾದರೂ ಏನಿದೆ? ಉನ್ನತ ಶಿಕ್ಷಣ ಎಲ್ಲರಿಗೂ ಏತಕ್ಕೆ ಬೇಕು? – ಎಂದು ಕೇಳಿಕೊಳ್ಳಬೇಕಾದ ಕಾಲ ಎದುರಾಗಿದೆ ಎಂದೇ ಭಾವಿಸುತ್ತೇನೆ. ದೇಶದ ಸಮಾಜೋ–ಆರ್ಥಿಕ, ಸಮಾಜೋ–ರಾಜಕೀಯ ವ್ಯವಸ್ಥೆಯ ಬದಲಾವಣೆ ಮತ್ತು ಬೆಳವಣಿಗೆಯಲ್ಲಿ ಉನ್ನತ ಶಿಕ್ಷಣ ಮಹತ್ವದ ಪಾತ್ರವಹಿಸುವುದು ನಿಜ. ಆದರೂ ದೇಶದ ಪ್ರತಿಯೊಬ್ಬರಿಗೆ ಉನ್ನತ ಶಿಕ್ಷಣದ ಅಗತ್ಯವೇ ಇಲ್ಲ. ನಮ್ಮಲ್ಲಿ ಖಾಸಗಿ ಮತ್ತು ಸರ್ಕಾರದ ವಿವಿಧ ಹಂತಗಳಲ್ಲಿ ಮಾಡಬೇಕಾದ ಎಷ್ಟೋ ಕೆಲಸಗಳನ್ನು ಪಿ.ಯು.ಸಿ. ನಂತರ ಮೂರರಿಂದ ಆರು ತಿಂಗಳ ತರಬೇತಿ ಪಡೆದವರು ಯಶಸ್ವಿಯಾಗಿ ನಿರ್ವಹಿಸಲು ಸಾಧ್ಯ. ಈ ಹಂತದಲ್ಲಿ ಪದವಿ ಪಡೆದವರೇ ನಿರ್ವಹಿಸಬೇಕಾದ ಕೆಲಸಗಳು ಹೆಚ್ಚಿಲ್ಲ. ಯಾರು ಉನ್ನತ ಶಿಕ್ಷಣ ಪಡೆದು ಸಂಶೋಧನೆ ಮಾಡಬಯಸುತ್ತಾರೆ ಅಂತಹವರು ಸ್ನಾತಕೋತ್ತರ ಪದವಿ ಪಡೆಯಬೇಕು. ಕೇವಲ ಜ್ಞಾನಾರ್ಜನೆಗಾಗಿ ಓದುವವರಿಗೆ ಸ್ನಾತಕೋತ್ತರ ಪದವಿಯ ಅಗತ್ಯವೇ ಇಲ್ಲ. ಸರ್ಕಾರದ ಆದ್ಯತೆ ದೇಶದ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ನೀಡುವುದಾಗಬೇಕು. ರಾಜ್ಯ–ಕೇಂದ್ರ ಸರ್ಕಾರಗಳು ಯುನೆಸ್ಕೊ ಮುಂತಾದ ಅಂತರ್‌ರಾಷ್ಟ್ರೀಯ ಸಂಸ್ಥೆಗಳಿಂದ ಅಪಾರ ಆರ್ಥಿಕ ನೆರವು ಪಡೆಯುತ್ತಿದ್ದರೂ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಕೊಡುವುದು ಸಾಧ್ಯವಾಗಿಲ್ಲ. ಪ್ರಾಥಮಿಕ ಶಿಕ್ಷಣದ ಗತಿಯೇ ಹೀಗಿರುವಾಗ ಉನ್ನತ ಶಿಕ್ಷಣ, ಸಂಶೋಧನೆಯ ಸ್ಥಿತಿಗತಿಗಳು ನಮ್ಮಲ್ಲಿ ಹೇಗಿರಬೇಡ? ಆದರೂ ಉನ್ನತ ಶಿಕ್ಷಣಕ್ಕೆ ಸೇರಬಯಸುವವರನ್ನು ಮೀಸಲಾತಿಗನುಗುಣವಾಗಿ ಆಯ್ಕೆ ಮಾಡಿಕೊಳ್ಳಬೇಕು.

ದೇಶದಲ್ಲಿ ಪ್ರತಿವರ್ಷ ಹೊಸಹೊಸ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗುತ್ತಿದ್ದರೂ ಅವು ಗುಣಮಟ್ಟದ ಶಿಕ್ಷಣ ನೀಡಲು ವಿಫಲವಾಗಿವೆ. ಮುಖ್ಯವಾಗಿ ವ್ಯಾಪಕ ಅಧ್ಯಯನ ಮತ್ತು ಹೊಸ ಜ್ಞಾನಸೃಷ್ಟಿ ಅಥವಾ ಜನಪರವಾದ ಸಂಶೋಧನೆಗಳು ಅಪೇಕ್ಷಿತ ಮಟ್ಟದಲ್ಲಿ ನಡೆಯದಿರುವುದರಿಂದ ಉನ್ನತ ಶಿಕ್ಷಣಕ್ಷೇತ್ರ ಬಡವಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಎಷ್ಟೋ ವಿಷಯಗಳನ್ನು ಚೆನ್ನಾಗಿ ಕಲಿಸುವ ವಿದ್ವಾಂಸರು ಹಾಗೂ ಹೊಸ ಹೊಸ ಸಂಶೋಧನೆಗೆ ಸೂಕ್ತ ಮಾರ್ಗ ದರ್ಶನ ನೀಡಬಲ್ಲ ಸಮರ್ಥರಾದ ಮಾರ್ಗದರ್ಶಕರ ಕೊರತೆಯಿಂದ ಉನ್ನತ ಶಿಕ್ಷಣ ಕ್ಷೇತ್ರವು ಬೌದ್ಧಿಕ ದಾರಿದ್ರ್ಯದಲ್ಲಿ ನರಳುತ್ತಿದೆ. ರಾಜಕೀಯ ಹಸ್ತಕ್ಷೇಪ, ಜಾತಿ ರಾಜಕಾರಣ, ಭ್ರಷ್ಟಾಚಾರ, ಲೈಂಗಿಕ ಹಗರಣ ಮುಂತಾದ ಮಾರಕ ಸಂಗತಿಗಳಿಂದ ಹಲವು ವಿಶ್ವವಿದ್ಯಾಲಯಗಳು ಕುಖ್ಯಾತಿ ಪಡೆದಿವೆ. ಈ ಪರಿಸ್ಥಿತಿಗೆ ಉನ್ನತ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿವರೆಲ್ಲ ಸಮಾನ ಹೊಣೆಗಾರರಾಗಿರುತ್ತಾರೆ. ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವ ಬೋಧಕರ ಸಂಬಳ–ಸಾರಿಗೆ–ಸೌಲಭ್ಯಗಳು ಹೆಚ್ಚಿವೆಯೇ ಹೊರತು, ಬೋಧನೆ, ಅಧ್ಯಯನ, ವಿದ್ವತ್ತು, ಕಲಿಸುವ ಪ್ರೀತಿ–ಬದ್ಧತೆಗಳಲ್ಲ.

ಕೆಲವು ವಿಶ್ವ ವಿದ್ಯಾಲಯಗಳಲ್ಲಿ ಶೈಕ್ಷಣಿಕ ವಾತಾವರಣವೇ ಇಲ್ಲ ಹೀಗಾಗಿ ಎಷ್ಟೋ ವಿಶ್ವವಿದ್ಯಾಲಯಗಳು ಪರೀಕ್ಷಾ ಪ್ರಾಧಿಕಾರಗಳ ಮಟ್ಟಕ್ಕೆ ಕುಸಿದಿವೆ.

ವಿಶ್ವವಿದ್ಯಾಲಯದ ಮೂಗಿನಡಿ ನಡೆಯುವ ಸ್ನಾತಕೋತ್ತರ ವಿಭಾಗಗಳ ಪರಿಸ್ಥಿತಿಯೇ ಹೀಗಿರುವಾಗ ಪದವಿ ಕಾಲೇಜುಗಳಲ್ಲಿ ಸ್ಥಾಪನೆಯಾಗಿರುವ ಸ್ನಾತಕೋತ್ತರ ಕೇಂದ್ರಗಳ ಪರಿಸ್ಥಿತಿ ಹೇಗಿರಬಹುದು? ಈಗ ರಾಜ್ಯದಲ್ಲಿ ನಾಲ್ಕು ನೂರಕ್ಕೂ ಹೆಚ್ಚು ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು, ಮುನ್ನೂರ ಅರವತ್ತು ಅನುದಾನಿತ ಕಾಲೇಜುಗಳು, ಸಾವಿರಕ್ಕೂ ಹೆಚ್ಚು ಅನುದಾನ ರಹಿತ ಖಾಸಗಿ ಕಾಲೇಜುಗಳಿವೆ. ಈ ಎಲ್ಲ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧ್ಯಾಪಕರಲ್ಲಿ ಅರೆಕಾಲಿಕ ಮತ್ತು ಅತಿಥಿ ಉಪನ್ಯಾಸಕರೇ ಹೆಚ್ಚು. ಖಾಯಂ ನೌಕರಿಯಿಲ್ಲದ, ಜೀವನ ನಿರ್ವಹಣೆಗೆ ಅಗತ್ಯವಾದಷ್ಟು ಸಂಬಳವೂ ಇರದ, ಅತಂತ್ರಸ್ಥಿತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪನ್ಯಾಸಕರಿಂದ ಉನ್ನತ ಶಿಕ್ಷಣ ಸುಧಾರಣೆಗೊಳ್ಳುವುದಾದರೂ ಹೇಗೆ? ಈ ಯುವ ಉತ್ಸಾಹಿ ಯುವಕರು ಪ್ರಾಮಾಣಿಕವಾಗಿ ಕರ್ತವ್ಯ ನಿರ್ವಹಿಸಿದರೂ ಅವರನ್ನು ನಿರುತ್ಸಾಹಗೊಳಿಸುವ, ಕಲಿಸುವ ಪ್ರೀತಿಯನ್ನು ಕುಗ್ಗಿಸುವ ವಾತಾವರಣದಲ್ಲಿ ಅವರು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವೇ? ಹೀಗಾಗಿ ಜ್ಞಾನದ ಹಂಬಲ, ವಿದ್ಯಾರ್ಜನೆಯ ಬಯಕೆ, ಸಮಕಾಲೀನ ಸವಾಲುಗಳನ್ನು ಎದುರಿಸಲು ಕೌಶಲಗಳನ್ನು ಕಲಿಯುವ ಆಸೆಯಿಂದ ಪದವಿ ಕಾಲೇಜುಗಳಿಗೆ ಬರುತ್ತಿರುವ ಚಿಮ್ಮುವ ಉತ್ಸಾಹದ ಯುವ ಜನರ ಆಶೋತ್ತರಗಳು ಇಂತಹ ನಿರುತ್ಸಾಹಕರ ವಾತಾವರಣದಲ್ಲಿ ಈಡೇರುವುದರೂ ಹೇಗೆ? – ಎಂಬ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುತ್ತಿಲ್ಲ.

ಒಂದು ರಾಜ್ಯದಲ್ಲಿ ಎಷ್ಟು ವಿಶ್ವವಿದ್ಯಾಲಯಗಳಿವೆ, ಎಷ್ಟು ಸ್ನಾತಕೋತ್ತರ ಕೇಂದ್ರಗಳಿವೆ, ಎಷ್ಟು ಪದವಿ ಕಾಲೇಜುಗಳಿವೆ ಎಂಬ ಪ್ರಶ್ನೆ ಮುಖ್ಯವಾಗಬಾರದು. ಅವುಗಳಲ್ಲಿ ಎಷ್ಟು ವಿಶ್ವವಿದ್ಯಾಲಯಗಳು, ಪದವಿ ಕಾಲೇಜುಗಳು ಗುಣಮಟ್ಟದ ಶಿಕ್ಷಣ ನೀಡುತ್ತಿವೆ ಎಂಬುದು ನಮ್ಮ ಹೆಮ್ಮೆಯ ಸಂಗತಿಯಾಗಬೇಕು. ಹೀಗಾಗಿ ನಮ್ಮಲ್ಲಿರುವ ಎಷ್ಟೋ ಕಾಲೇಜುಗಳನ್ನು, ಸ್ನಾತಕೋತ್ತರ ಕೇಂದ್ರಗಳನ್ನು ಮಾತ್ರವಲ್ಲ ಕೆಲವು ವಿಶ್ವವಿದ್ಯಾಲಯಗಳನ್ನು ಮುಚ್ಚಿದರೂ ಯಾವ ನಷ್ಟವೂ ಉಂಟಾಗದು–ಹಾಗಿದೆ ಅವುಗಳ ದುಸ್ಥಿತಿ. ಇಂತಹ ಚಿಂತಾಜನಕ ಪರಿಸ್ಥಿತಿಯಲ್ಲಿ ಉನ್ನತ ಶಿಕ್ಷಣವು ಏದುಸಿರು ಬಿಡುತ್ತಿದ್ದರೂ ೨೦೨೦ನೇ ಇಸವಿಯ ವೇಳೆಗೆ ಉನ್ನತ ಶಿಕ್ಷಣವನ್ನು ಪಡೆಯುವವರ ಸಂಖ್ಯೆಯನ್ನು ಈಗಿರುವ ಶೇಕಡ ಹದಿನಾಲ್ಕರಿಂದ ಇಪ್ಪತ್ತಕ್ಕೆ ಏರಿಸುವ ಪ್ರಸ್ತಾಪ ಸರ್ಕಾರದ ಮುಂದಿದೆ.

ಗುಣಮಟ್ಟದ ಬೋಧನೆ, ಜನಪರ ಮತ್ತು ಹೊಸಜ್ಞಾನ ಸೃಷ್ಟಿಸುವಂತಹ ಸಂಶೋಧನೆಗೆ ಪ್ರೋತ್ಸಾಹ, ಶೈಕ್ಷಣಿಕ ವಾತಾವರಣ ನಿರ್ಮಾಣ ಮುಂತಾದ ಅಗತ್ಯಗಳನ್ನು ಪೂರೈಸದೆ ಕೇವಲ ವಿದ್ಯಾರ್ಥಿಗಳ ಸಂಖ್ಯೆಯನ್ನು ಹೆಚ್ಚಿಸಿದ ಮಾತ್ರಕ್ಕೆ ಏನನ್ನು ಸಾಧಿಸಿದಂತಾಗದು. ರಾಜಕೀಯ ಲಾಭಕ್ಕೆ, ರಾಜಕಾರಣಿಗಳ ಪ್ರತಿಷ್ಠೆ ಪ್ರಚಾರಕ್ಕೆ ವಿಶ್ವವಿದ್ಯಾಲಯಗಳನ್ನು ಹೊಸದಾಗಿ ಪ್ರಾರಂಭಿಸುವುದರಿಂದ ಶೈಕ್ಷಣಿಕ ಪ್ರಗತಿ, ಜ್ಞಾನಸೃಷ್ಟಿ ಸಾಧ್ಯವಾಗದು.

ಉನ್ನತ ಶಿಕ್ಷಣ ಎದುರಿಸುತ್ತಿರುವ ಮತ್ತೊಂದು ಗಂಭೀರ ಸಮಸ್ಯೆ ಇದೆ : ಅದು ಉನ್ನತ ಶಿಕ್ಷಣದ ಅಂಟಂಣಿಚಡಿಣಟಜಟಣಿಚಿಟುದಚಿಣುಂಟಿ – ಎಂದರೆ, ತಾಂತ್ರಿಕ ವಿಶ್ವವಿದ್ಯಾಲಯ, ವೈದ್ಯಕೀಯ ವಿಶ್ವವಿದ್ಯಾಲಯ, ಕಾನೂನು ವಿಶ್ವವಿದ್ಯಾಲಯ, ಜನಪದ ವಿಶ್ವವಿದ್ಯಾಲಯ, ಸಂಸ್ಕೃತ ವಿಶ್ವವಿದ್ಯಾಲಯ, ಸಂಗೀತ ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಕೃಷಿ ವಿಶ್ವವಿದ್ಯಾಲಯ, ತೋಟಗಾರಿಕೆ ವಿಶ್ವವಿದ್ಯಾಲಯ, ಪಶುಸಂಗೋಪನಾ ವಿಶ್ವವಿದ್ಯಾಲಯ – ಹೀಗೆ ವಿಷಯವಾರು ವಿಶ್ವವಿದ್ಯಾಲಯ ಸ್ಥಾಪನೆ ಶಿಕ್ಷಣದ ಸಮಗ್ರತೆ ಮತ್ತು ಅಂತರ್‌ಶಿಸ್ತೀಯ ಅಧ್ಯಯನಕ್ಕೆ ಮಾರಕವಾಗುವುದು. ಈ ವಿನಾಶಕಾರಿ ಬೆಳವಣಿಗೆಯನ್ನು ಕುರಿತು ಶಿಕ್ಷಣತಜ್ಞರು ವಿರೋಧಿಸಿದ್ದರೂ ರಾಜಕೀಯ ಮತ್ತು ಇತರೆ ಲಾಭದ ಲೆಕ್ಕಾಚಾರದಲ್ಲಿ ಮುಳುಗಿರುವ ರಾಜಕಾರಣಿಗಳು, ಅಧಿಕಾರಿಗಳ ಕಿವಿಗೆ ಆ ಪ್ರತಿರೋಧದ ಧ್ವನಿ ಕೇಳುತ್ತಿಲ್ಲ. ತಜ್ಞರ ವಿವೇಕದ ಮಾತುಗಳಿಗೆ ಆಳುವವರ್ಗ ಕಿವಿಮುಚ್ಚಿ ಬಹಳ ಕಾಲವೇ ಆಗಿದೆ. ವಿಶ್ವವಿದ್ಯಾಲಯದ ಬೆಳವಣಿಗೆ, ಉನ್ನತ ಶಿಕ್ಷಣದ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಅಗತ್ಯ ಮೂಲ ಸೌಲಭ್ಯ, ಬೋಧಕವರ್ಗ, ಶೈಕ್ಷಣಿಕ ವಾತಾವರಣ ನಿರ್ಮಾಣ ಮುಂತಾದ ಯಾವುದಕ್ಕೂ ಗಮನಕೊಡದೆ ಯಾವ ಪುರುಷಾರ್ಥಕ್ಕೆ ತೆರಿಗೆ ಹಣ ಪೋಲು ಮಾಡಿ ಹೊಸ ವಿಶ್ವವಿದ್ಯಾಲಯಗಳನ್ನು ಆರಂಭಿಸಲಾಗುತ್ತಿದೆ? ಬಾಲಗ್ರಹ ಪೀಡಿತವಾಗಿರುವ, ರೋಗಗ್ರಸ್ಥವಾಗಿರುವ ವಿಶ್ವವಿದ್ಯಾಲಯಗಳ ಪರಿಸ್ಥಿತಿಯನ್ನು ಮೊದಲು ಸುಧಾರಿಸಬೇಕಲ್ಲವೇ? ಎಷ್ಟೋ ಪ್ರಥಮ ದರ್ಜೆ ಕಾಲೇಜುಗಳ ಸ್ಥಾಪನೆಯಲ್ಲೂ ಯಾವುದೇ ವಿವೇಕ ಕೆಲಸ ಮಾಡಿದೆ ಎಂದು ಹೇಳಲಾಗದು. ಅಗತ್ಯವಿರುವ ಕಡೆ ಕಾಲೇಜು ತೆರೆಯದೆ, ಈಗಾಗಲೇ ಇರುವ ಕಡೆ ಹೊಸ ಕಾಲೇಜು ಪ್ರಾರಂಭಿಸುವುದು ನಡೆದೇ ಇದೆ.

ಒಟ್ಟಾರೆ, ಪದವಿ ಕಾಲೇಜು, ಸ್ನಾತಕೋತ್ತರ ಕೇಂದ್ರ, ವಿಶ್ವವಿದ್ಯಾಲಯಗಳು ಗಂಭೀರ ಸಮಸ್ಯೆಗಳನ್ನು ಎದುರಿಸುತ್ತಿವೆ. ಅವು ಹಲವು ಕೊರತೆಗಳ ನಡುವೆ ಹೇಗೊ ಕಾರ್ಯ ನಿರ್ವಹಿಸುತ್ತಿವೆ. ಉನ್ನತ ಶಿಕ್ಷಣದ ಮಾತೃ ಸಂಸ್ಥೆಯಂತಿರುವ ಪದವಿ ಕಾಲೇಜುಗಳನ್ನು, ಸ್ನಾತಕೋತ್ತರ ಕೇಂದ್ರಗಳನ್ನು ಅರೆಕಾಲಿಕ ಮತ್ತು ಅತಿಥಿ ಉಪನ್ಯಾಸಕರನ್ನು ಇಟ್ಟುಕೊಂಡು ಎಷ್ಟು ಕಾಲ ನಡೆಸುವುದು? ಎಲ್ಲೆಲ್ಲೂ ಬೌದ್ಧಿಕ ದಾರಿದ್ರ್ಯ, ದುರ್ಬಲ ಮತ್ತು ಅಪ್ರಸ್ತುತ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳು, ಸಂಶೋಧನೆಗೆ ಪ್ರೋತ್ಸಾಹಕದ ವಾತಾವರಣವಿಲ್ಲದಿರುವುದು ಇಂತಹ ಕೊರತೆಗಳಿಂದ ಕೂಡಿ ರೋಗಗ್ರಸ್ಥವಾಗಿರುವ ಉನ್ನತ ಶಿಕ್ಷಣ ವ್ಯವಸ್ಥೆಗೆ ಹೊಸ ರಕ್ತ ತುಂಬದೆ, ಕೇವಲ ಹೊರ ರೂಪದಲ್ಲಿ ಬದಲಾವಣೆ ಮಾಡಿ ರೂಪಿಸಿದ ಹೊಸ ಶಿಕ್ಷಣ ನೀತಿಯಿಂದ ಯಾವ ಪ್ರಯೋಜನವಿಲ್ಲ. ಶಿಕ್ಷಣ ಪ್ರೇಮಿಗಳು, ಅಧ್ಯಾಪಕರು, ಸಮಾಜ, ಸರ್ಕಾರ – ಎಲ್ಲರೂ ಕೂಡಿ ಉನ್ನತ ಶಿಕ್ಷಣಕ್ಕೆ ಹೊಸನೀತಿಯನ್ನು – ಪ್ರಜಾತಾಂತ್ರಿಕ ಚೌಕಟ್ಟಿನಲ್ಲಿ, ಪ್ರಜಾಪ್ರಭುತ್ವದ ಮೌಲ್ಯ–ಆಶಯಗಳಿಗೆ ಪೂರಕವಾದ ಉನ್ನತ ಶಿಕ್ಷಣ ನೀತಿಯನ್ನು – ರೂಪಿಸಬೇಕು. ಇದು ಸಮೂಹದ ಪಾಲುದಾರಿಕೆಯಿಂದ ಆಗಬೇಕಾದ ಕೆಲಸವೇ ಹೊರತು ನಾಲ್ಕು ಜನರಿಂದಾಗುವ ಕೆಲಸವಲ್ಲ. ಇದು ಉನ್ನತ ಶಿಕ್ಷಣಕ್ಕೆ ವಿದ್ಯಾರ್ಥಿಸ್ನೇಹಿಯೂ ಸಮಾಜಮುಖಿಯೂ ಆದ ಹೊಸನೀತಿಯೊಂದು ರೂಪುಗೊಳ್ಳಬೇಕಾಗಿದ ಅಗತ್ಯ ತುಂಬ ಇದೆ.



**(ದೊಡ್ಡಬಳ್ಳಾಪುರದ ಶ್ರೀ ಕೋಗಾಡಿಯಪ್ಪ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿರುವ ಎಂ.ಜಿ. ಚಂದ್ರಶೇಖರಯ್ಯ ಹಲವು ಪುಸ್ತಕಗಳ ಲೇಖಕರು ಮತ್ತು ಸಂಪಾದಕರು)**

---

**೬ನೇ ಪುಟದಿಂದ)**

ಎರವಲು ಕೊಟ್ಟೆವು. ಅವುಗಳಲ್ಲಿ ಕೆಲವು ತಿರುಗಿ ಬರಲಿಲ್ಲ. ಮತ್ತೆ ಕೆಲವು ಬಳಕೆಯಾಗದೆ ತಿರುಗಿ ಬಂದವು. ಕಲಾ ವಿಭಾಗದೊಂದಿಗೆ ವಿಜ್ಞಾನ ಮತ್ತು ವಾಣಿಜ್ಯ ವಿಭಾಗಗಳಿರುವ ಕಾಲೇಜುಗಳಲ್ಲಿ ಕನ್ನಡ ಭಾಷಾ ವಿಷಯ ಬೋಧನೆಯೇ ಅನಗತ್ಯ ಕಾಲಹರಣ ಎಂಬ ತೀರ್ಮಾನಕ್ಕೆ ಕೆಲವರು ಬಂದಿದ್ದಾರೆ. ಎಗ್ಗಿಲ್ಲದೆ ಅದನ್ನು ಹೇಳಿಯೂ ಇದ್ದಾರೆ. ಮತ್ತೊಂದು ಚೋದ್ಯ ಸಂಗತಿಯೆಂದರೆ ಐಚ್ಛಿಕ ಕನ್ನಡ ವಿಷಯವನ್ನು ಪಿ.ಯು. ಹಂತದಲ್ಲಿ ಇದ್ದಾಗ ಅಧ್ಯಯನ ಮಾಡಿದ್ದ ನಾನು, ಅತ್ಯುತ್ಸಾಹದಿಂದ ಐಚ್ಛಿಕ ಕನ್ನಡ ತರಗತಿಗಳನ್ನು ಕೇಳಿ ತೆಗೆದುಕೊಂಡೆ. ಆಗ ಅರ್ಥವಾದ ಸಂಗತಿ ಪ್ರವೇಶದ ಕಡೆಯ ಹಂತದಲ್ಲಿ ಎಲ್ಲ ಸಂಯೋಜನೆಗಳ ಸೀಟು ಮುಗಿದು ಇಷ್ಟವಿಲ್ಲದಿದ್ದರೂ ಸೇರಿದ್ದ ವಿದ್ಯಾರ್ಥಿಗಳೇ ಅಲ್ಲಿ ಇದ್ದದ್ದು. ಎಸ್.ಎಸ್.ಎಲ್.ಸಿ.ಯಲ್ಲಿ ಕನ್ನಡದಲ್ಲಿ ನೂರಕ್ಕೆ ತೊಂಬತ್ತು ಅಂಕ ಗಳಿಸಿದ್ದವರೆಲ್ಲಾ ವಿಜ್ಞಾನ ಹಾಗೂ ವಾಣಿಜ್ಯ ಸಂಯೋಜನೆಗಳಿಗೆ ಭರ್ತಿಯಾಗಿದ್ದರು. ಕನ್ನಡದಲ್ಲಿ ಅತ್ಯಂತ ಕನಿಷ್ಠ ಅಂಕಗಳನ್ನು ಪಡೆದ, ಹಳೆಗನ್ನಡ ಪದ್ಯಭಾಗವನ್ನು ನೋಡಿ ಹೆದರುವವರು ಐಚ್ಛಿಕ ಕನ್ನಡದಲ್ಲಿದ್ದರು. ಈ ವಿಸಂಗತಿಯನ್ನು ಪ್ರಾಂಶುಪಾಲರ ಗಮನಕ್ಕೆ ತಂದಾಗ ಬಲವಂತವಾಗಿ ಅವರನ್ನು ಐಚ್ಛಿಕ ವಿಷಯಕ್ಕೆ ಸೇರಿಸದಿದ್ದರೆ ಕಾಂಬಿನೇಷನ್ ಮುಚ್ಚಬೇಕಾಗಿತ್ತು ಎಂಬ ತಾಂತ್ರಿಕ ಸಮಜಾಯಿಷಿ ಕೊಟ್ಟರು.

ಉಳ್ಳವರ ಮಕ್ಕಳು ವಿಜ್ಞಾನ ವಿಭಾಗಕ್ಕೆ, ಮಧ್ಯಮ ವರ್ಗದವರು ವಾಣಿಜ್ಯ ವಿಭಾಗಕ್ಕೆ, ಬಡವರು ಮತ್ತು ದಲಿತರ ಮಕ್ಕಳು ಕಲಾ ವಿಭಾಗಕ್ಕೆ ಎಂಬ ಸ್ಪಷ್ಟ ಅಘೋಷಿತ ವಿಭಾಗೀಕರಣವೊಂದು ಶಿಕ್ಷಣ ವ್ಯವಸ್ಥೆಯಲ್ಲಿ ಬೇರೂರಿಬಿಟ್ಟಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕುವೆಂಪು ಅವರು ಮಲ್ಲಗೀತೆ ಕವಿತೆಯಲ್ಲಿ ಹೇಳುವ : "ಒಳಿತಾಗುವುದೆಲ್ಲ ಬೇವು, ತುದಿಯಲ್ಲಿ ಬೆಲ್ಲ" ಎಂಬ ಸಾಲುಗಳು ಬಿಂಬಿಸುವ ಆಶಾವಾದವನ್ನು ನಂಬಿ ಕನ್ನಡ ಭಾಷೆ ಹಾಗೂ ಸಾಹಿತ್ಯವನ್ನು ಕಲಿಸುವ ಪ್ರಯತ್ನದಲ್ಲಿ ಮುಂದುವರೆಯುತ್ತಿದ್ದೇನೆ.



**(ಹಾಸನ ಜಿಲ್ಲೆಯ ಗ್ರಾಮಾಂತರದಲ್ಲಿ ಪ.ಪೂ. ವಿದ್ಯಾರ್ಥಿಗಳಿಗೆ ಕನ್ನಡ ಬೋಧಿಸುತ್ತಿರುವ ರೋಹಿತ್, ಸಾಹಿತ್ಯ–ಸಿನಿಮಾ–ನಾಟಕ ಇತ್ಯಾದಿ ಸಾಂಸ್ಕೃತಿಕ ಆಸಕ್ತಿಗಳನ್ನೂ ಹೊಂದಿರುವವರು)**

**ಸಮಕಾಲೀನ**

# ಅಂಬೇಡ್ಕರ್–ಗಾಂಧಿ ವಾಗ್ವಾದದ ಅರ್ಥಗಳು...



**ಈ** ಏಪ್ರಿಲ್ ೧೪ರಂದು ಬಾಬಾಸಾಹೇಬ್ ಭೀಮರಾವ್ ಅಂಬೇಡ್ಕರ್ ಅವರ ೧೨೫ನೇ ಜನ್ಮವರ್ಷಾಚರಣೆಗಳು ಆರಂಭವಾಗಲಿವೆ. ಹಾಗೆ ನೋಡಿದರೆ, ೨೫ ವರ್ಷಗಳ ಹಿಂದೆ ಆರಂಭವಾದ ಅಂಬೇಡ್ಕರ್ ಅವರ ಶತಮಾನೋತ್ಸವದ ಆಚರಣೆಯ ಮುಂದುವರಿಕೆ ಇದೆಂದೂ ಹೇಳಬಹುದು. ಏಕೆಂದರೆ, ತೊಂಬತ್ತರ ದಶಕದಲ್ಲಿ ವಿ.ಪಿ. ಸಿಂಗ್ ಭಾರತದ ರಾಜಕಾರಣಕ್ಕೆ ನೀಡಿದ ಸಾಮಾಜಿಕ ನ್ಯಾಯದ ಹೊಸ ಆಯಾಮದ ಭಾಗವಾಗಿ ಘೋಷಿತವಾದ ಆ ಶತಮಾನೋತ್ಸವದ ಆಚರಣೆಗಳ ಆರಂಭದ ಮುನ್ನ ಅಂಬೇಡ್ಕರ್ ಸಾರ್ವಜನಿಕ ಜೀವನದಲ್ಲಿ ಚರ್ಚೆಗೆ ಬಂದುದು ಬಹು ಕಡಿಮೆ ಎಂದೇ ಹೇಳಬೇಕು. ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳುವಳಿ ಕೂಡ ಆರಂಭದಲ್ಲಿ ಅಂಬೇಡ್ಕರ್‌ಗಿಂತ ಹೆಚ್ಚಾಗಿ ನೆಚ್ಚಿದುದು ಅಮೆರಿಕಾದ ಕಪ್ಪುಜನರ ಚಳುವಳಿಯನ್ನೇ. ಕರ್ನಾಟಕದ ದಲಿತ ಚಳುವಳಿಗೆ ಕೂಡ ಅಂಬೇಡ್ಕರ್ ಏಕೈಕ ಸ್ಫೂರ್ತಿ ಶಕ್ತಿಯಾಗಿರಲಿಲ್ಲ. ಅಲ್ಲಿ ಅಂಬೇಡ್ಕರ್ ಜೊತೆಗೆ ಅಷ್ಟೇ ಪ್ರಾಮುಖ್ಯತೆಯೊಂದಿಗೆ ಗಾಂಧಿ, ಲೋಹಿಯಾ ಮತ್ತು ಮಾರ್ಕ್ಸ್ ಕೂಡ ಇದ್ದರು.

ನಿಜವಾಗಿ ಅಂಬೇಡ್ಕರ್ ಸಾರ್ವಜನಿಕ ಜೀವನದಲ್ಲಿ ದೊಡ್ಡ ವಿಗ್ರಹವಾಗಿ ಮೂಡಿದ್ದು ಕಾನ್ಶೀರಾಂ ಅವರ ಬಹುಜನ ಚಳುವಳಿ ಮತ್ತು ಅದರ ರಾಜಕೀಯ ರೂಪವಾದ ಬಹುಜನ ಸಮಾಜ ಪಕ್ಷದ ಒಂದು ಕಾಲದ ಯಶಸ್ಸಿನ ಪರಿಣಾಮವಾಗಿ. ಆದರೆ ಇಂದು ಅಂಬೇಡ್ಕರ್ ಬಹುಜನ ಸಮಾಜ ಪಕ್ಷದ ರಾಜಕಾರಣವನ್ನು ದಾಟಿ ಸಾರ್ವಜನಿಕ ಜೀವನದ ಹಲವು ಆಸಕ್ತಿಗಳ ಚರ್ಚೆಯ ವಸ್ತುವಾಗಿದ್ದಾರೆ. ವೈವಿಧ್ಯಮಯ ರಾಜಕೀಯ ಆಸಕ್ತಿಗಳ ಕೇಂದ್ರಬಿಂದುವಾಗಿ ಅವುಗಳಿಗೆ ತಕ್ಕಂತೆ ಹಲವು ರೀತಿಯ, ಹಲವು ನೆಲೆಗಳ ಅಧ್ಯಯನ ಮತ್ತು ವ್ಯಾಖ್ಯಾನಗಳಿಗೆ ಒಳಗಾಗಿದ್ದಾರೆ. ಅವರ ದಲಿತ ಚಿಂತನೆಯನ್ನೂ ಮೀರಿ, ಪ್ರಜಾತಂತ್ರ, ರಾಜಕೀಯ ಅರ್ಥಶಾಸ್ತ್ರ, ನಾಗರೀಕ ಹಕ್ಕುಗಳನ್ನು ಕುರಿತ ಅವರ ಜಿಜ್ಞಾಸೆಗಳ ಬಗ್ಗೆ ಇಂದು ಹೆಚ್ಚಿಗೆ ಚರ್ಚೆಗಳು ನಡೆಯುತ್ತಿವೆ. ಜಾಗತಿಕ ರಾಜಕಾರಣದಲ್ಲಿ ಎಡಪಂಥ ಎನ್ನುವುದು ನಗಣ್ಯ ಸ್ಥಿತಿ ತಲುಪಿ, ಜಗತ್ತಿನ ಅರ್ಧಭಾಗವನ್ನು ಬೌದ್ಧಿಕವಾಗಿ ಆಳಿದ ಅದರ ತಾತ್ವಿಕ ನೆಲೆಗಟ್ಟಾಗಿದ್ದ ಮಾರ್ಕ್ಸ್‌ವಾದ ಒಂದು ರಾಜಕೀಯ ಚಿಂತನೆಯಾಗಿಯಾದರೂ ತನ್ನ ಅಂತ್ಯವನ್ನು ಕಾಣುತ್ತಿರುವಂತೆ ತೋರುತ್ತಿದೆ. ಈ ಹೊತ್ತಿನಲ್ಲಿ ಭಾರತದ ಮಾರ್ಕ್ಸ್‌ವಾದಿಗಳು ಈವರೆಗೆ ತಾವು ಮರೆತೇ ಹೋಗಿದ್ದ ಅಂಬೇಡ್ಕರ್‌ರಲ್ಲಿ ಆಸರೆ ಪಡೆದು ರಾಜಕೀಯ ಪುನರ್‌ವಸತಿಗಾಗಿ ನಡೆಸಿರುವ ಪ್ರಯತ್ನದ ಭಾಗವಾಗಿಯೂ ಈ ಚರ್ಚೆಗಳನ್ನು ಪರಿಗ್ರಹಿಸಬಹುದಾಗಿದೆ.

ಆದರೆ ಈ ಚರ್ಚೆಗಳ ನಿಜವಾದ ವಿರೋಧಾಭಾಸವೆಂದರೆ, ಇದೇ ಅಂಬೇಡ್ಕರ್ ಈಗ ಮಾರ್ಕ್ಸ್‌ವಾದವನ್ನು ಜಗತ್ತಿನ ಪರಮಶತ್ರುಗಳಲ್ಲಿ ಒಂದು ಎಂದು ಪರಿಗಣಿಸುವ ಸಂಘ ಪರಿವಾರದ ಆರಾಧ್ಯ ದೈವವಾಗಿಯೂ ಪರಿವರ್ತಿತವಾಗಿದ್ದಾರೆ. ಅಂಬೇಡ್ಕರ್‌ರ ೧೨೫ನೇ ಜಯಂತ್ಯುತ್ಸವದ ಭರ್ಜರಿ ತಯಾರಿ ನಡೆದಿರುವುದು ಈ ಸಂಘ ಪರಿವಾರದ ಸರ್ಕಾರದಿಂದಲೇ. ಪ್ರಧಾನಿ ಮೋದಿಯವರು ಮೊನ್ನೆ ತಾನೇ ತಮಗೆ ಅಂಬೇಡ್ಕರ್ ಅವರ ಆಶೀರ್ವಾದವಿದೆ ಎಂದು ಘೋಷಿಸಿಕೊಂಡು ಅಂಬೇಡ್ಕರ್ ಸ್ಮಾರಕಕ್ಕೆ ಶಂಕುಸ್ಥಾಪನೆ ನೆರವೇರಿಸಿ, ಈ ಕೆಲಸ ಇಷ್ಟು ದಿನಗಳವರೆಗೆ ಏಕೆ ನಡೆಯಲಿಲ್ಲ? ಎಂದು ಮಾರ್ಮಿಕವಾಗಿ ಪ್ರಶ್ನಿಸಿದ್ದಾರೆ! ಅಷ್ಟೇ ಅಲ್ಲ, ಸಂಘ ಪರಿವಾರದ ಕಾರ್ಮಿಕ ವಿಭಾಗದ ಸಂಸ್ಥಾಪಕ ಮತ್ತು ಪ್ರಮುಖ ಆರೆಸ್ಸೆಸ್ ನಾಯಕರಲ್ಲೊಬ್ಬರಾದ ದತ್ತೋಪಂತ್ ತೇಂಗಡಿಯವರು ಅಂಬೇಡ್ಕರ್ ಬಗ್ಗೆ ಒಂದು ಉದ್ಗ್ರಂಥವನ್ನೇ ಬರೆದು ಅವರನ್ನು ಸಂಘ ಪರಿವಾರದ ಆಸ್ತಿ ಎಂಬಂತೆ ತಮ್ಮ ನೆನಪುಗಳಲ್ಲಿ ಮಂಡಿಸಿದ್ದಾರೆ. ಜೊತೆಗೆ ಈಗ ತೇಂಗಡಿಯವರು ೧೯೫೪ರ (ಉಪ)ಚುನಾವಣೆಯಲ್ಲಿ ಅಂಬೇಡ್ಕರ್ ಭಂಡಾರಾ ಕ್ಷೇತ್ರದಿಂದ ಲೋಕಸಭಾ ಚುನಾವಣೆಗೆ ನಿಂತಿದ್ದಾಗ ಆಗಲೇ ಆರೆಸ್ಸೆಸ್ ನಾಯಕರಾಗಿದ್ದ ತೇಂಗಡಿಯವರು ಅವರ ಚುನಾವಣಾ ಏಜೆಂಟರಾಗಿದ್ದರು ಎಂಬುದನ್ನೂ ಸಂಘ ಪರಿವಾರದವರು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದಾರೆ. ಅಷ್ಟೇ ಅಲ್ಲ ಆರೆಸ್ಸೆಸ್ ಸ್ವಯಂಸೇವಕರು ಭಾರತದ ಐಕ್ಯತೆಯ ಸಂಕೇತವಾಗಿದ್ದಾರೆಂದೂ, ಆರೆಸ್ಸೆಸ್‌ನ ಭಗವಾಧ್ವಜ ರಾಷ್ಟ್ರ ಧ್ವಜವಾಗಬೇಕೆಂದೂ ಸಂಸ್ಕೃತ ರಾಷ್ಟ್ರ ಭಾಷೆಯಾಗಬೇಕೆಂದೂ ಅಂಬೇಡ್ಕರ್ ಹೇಳಿದ್ದರೆಂದು ಆರೆಸ್ಸೆಸ್ ಸರಸಂಘಚಾಲಕ ಮೋಹನ ಭಾಗವತ್‌ರವರು ತೇಂಗಡಿಯವರನ್ನು ಉಲ್ಲೇಖಿಸಿ ಹೇಳುತ್ತಿದ್ದಾರೆ. 'ನಾನು ಹಿಂದೂವಾಗಿ ಮಾತ್ರ ಸಾಯಲಾರೆ' ಎಂದು ಘೋಷಿಸಿ ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಬೌದ್ಧ ಮತ ಸೇರಿದ ಅಂಬೇಡ್ಕರ್‌ರನ್ನು ಇಂದು ಹಿಂದುತ್ವವನ್ನು ಎತ್ತಿಹಿಡಿಯುವ ಸಂಘ ಪರಿವಾರವು ತಮ್ಮವರು ಎಂದು ತನ್ನದೇ ಪುರಾವೆಗಳೊಂದಿಗೆ ಹೇಳಿಕೊಳ್ಳುವುದು ಸಾಧ್ಯವಾಗಿದೆ ಎಂದರೆ ಏನು ಹೇಳುವುದು? ಈ ವಿಪರ್ಯಾಸವನ್ನು ಹೇಗೆ ವಿವರಿಸುವುದು? ಹಾಗಾದರೆ ನಿಜವಾದ ಅಂಬೇಡ್ಕರ್ ಯಾರು? ಆ ವ್ಯಕ್ತಿತ್ವದ ಪುನರನ್ವೇಷಣೆಯ ಮಾರ್ಗಕ್ಕೆ ನಿಜ ಒರೆಗಲ್ಲಾದರೂ ಯಾವುದು?



ಇದು ಇಂದಿನ ಬಹುಮುಖ್ಯ ಪ್ರಶ್ನೆಯಾಗಿದೆ. ಇದು ಕೇವಲ ಅಂಬೇಡ್ಕರ್ ವ್ಯಕ್ತಿತ್ವದ ಚಾರಿತ್ರಿಕ ಪುನರನ್ವೇಷಣೆಗೆ ಸಂಬಂಧಿಸಿದ ಪ್ರಶ್ನೆ ಮಾತ್ರವಲ್ಲ. ಇದು, ಭಾರತದ ಇಂದಿನ ರಾಜಕಾರಣ ಪಡೆಯುತ್ತಿರುವ ಹೊಸ ದಿಕ್ಕು ಮತ್ತು ಸ್ವರೂಪ ಹುಟ್ಟಿಸುತ್ತಿರುವ ಆತಂಕಗಳನ್ನು ಎದುರಿಸಲು ನಾವು ಹಿಡಿಯಬೇಕಾದ ಮಾರ್ಗಕ್ಕೆ ಸಂಬಂಧಿಸಿದ ಪ್ರಶ್ನೆ ಕೂಡ. ಈ ದೃಷ್ಟಿಯಿಂದ ಆಲೋಚಿಸಿದಾಗ ನಮಗೆ ಎದ್ದು ಕಾಣುವ ಸಂಗತಿ ಎಂದರೆ, ಅಂಬೇಡ್ಕರ್‌ರ ಪುನರನ್ವೇಷಣೆಯ ಈ ಎರಡೂ ರಾಜಕೀಯ ಪ್ರಯತ್ನಗಳಲ್ಲಿ ಅವರ ಹೋರಾಟದ ಬದುಕಿನ ಎಲ್ಲ ಮುಖ್ಯ ಸಂಚಲನೆಗಳಿಗೆ ಪ್ರಚೋದಕರಾಗಿ, ಅವರ ಸಾರ್ವಜನಿಕ ವ್ಯಕ್ತಿತ್ವದ ನಿರೂಪಣೆಗೆ ಕಾರಣರಾಗಿದ್ದ ಗಾಂಧಿ ಕಾಣೆಯಾಗಿರುವುದು. ಇತಿಹಾಸದಲ್ಲಿ ಗಾಂಧಿ ಇಲ್ಲದೆ ಅಂಬೇಡ್ಕರ್‌ರನ್ನು ಕಲ್ಪಿಸಿಕೊಳ್ಳುವುದು ಸಾಧ್ಯವೇ? ಹಾಗಾಗಿ ಅಂಬೇಡ್ಕರ್‌ರ ಪುನರನ್ವೇಷಣೆಯ ಈ ಎರಡೂ ಪ್ರಯತ್ನಗಳು–ಚರ್ಚೆಗಳು–ಚಾರಿತ್ರಿಕ ಪ್ರಜ್ಞೆಯ ಕೊರತೆಯಿಂದ ನರಳುತ್ತವೆ ಎಂದೇ ಹೇಳಬೇಕು. ಹಾಗಾದರೆ ಈ ಕೊರತೆಯನ್ನು ನೀಗಿಸಲು–ಇಂದಿನ ಸಂದರ್ಭದಲ್ಲಿ ಅಂಬೇಡ್ಕರರನ್ನು ಚಾರಿತ್ರಿಕವಾಗಿ ಗಾಂಧೀಜಿಗೆ ಮುಖಾಮುಖಿಗೊಳಿಸಲು–ಇರುವ ಮುಖ್ಯ ನೆಲೆಗಳಾದರೂ ಯಾವುವು? ಆ ಮುಖ್ಯ ನೆಲೆ, ಹಿಂದೂ ಧರ್ಮ ಕುರಿತ ಅವರಿಬ್ಬರ ನಿಲುವುಗಳು ಎಂದು ಹೇಳುವುದು ಸರಿಯಾದರೂ ಮತ್ತು ಇವರಿಬ್ಬರ ವಾಗ್ವಾದ ಇವುಗಳ ಸುತ್ತಲೇ ನಡೆದುವೆಂದು ಹೇಳಬಹುದಾದರೂ, ಈ ವಾಗ್ವಾದದ ಹಿಂದೆ ಇದ್ದುದು ಆ ಹಿಂದೂ ಧರ್ಮ ಕುರಿತ ಅವರಿಬ್ಬರ ಗ್ರಹಿಕೆ ಮತ್ತು ಅನುಭವಗಳ ವ್ಯತ್ಯಾಸಗಳು ಎಂಬುದನ್ನು ನಾವು ಗಮನಿಸಬೇಕು. ಇಲ್ಲದಿದ್ದರೆ, ಈ ವಾಗ್ವಾದ ಇಂದಿನ ರಾಜಕಾರಣದ ಪರಿಪ್ರೇಕ್ಷ್ಯದಲ್ಲಿ ಯಾವ ಪ್ರಯೋಜನಕ್ಕೂ ಬಾರದಾಗಿರುತ್ತದೆ.

ಹಾಗಾದರೆ, ಅಂಬೇಡ್ಕರ್ ಅಸ್ಪೃಶ್ಯರಾಗಿ ಹುಟ್ಟಿ ಎದುರಿಸಿದ ಅವಮಾನ–ಸಂಕಷ್ಟಗಳು ಹಿಂದೂ ಧರ್ಮ ಕುರಿತ ಅವರ ಗ್ರಹಿಕೆಯನ್ನು ರೂಪಿಸಿದರೆ, ವೈಶ್ಯರಾಗಿ ಹುಟ್ಟಿ ಅಂತಹ ಅವಮಾನ–ಸಂಕಷ್ಟಗಳಿಗೆ ಸಿಕ್ಕದ ಗಾಂಧಿಗೆ ಅಂಬೇಡ್ಕರ್



ಕಾರ್ಲ್ ಮಾರ್ಕ್ಸ್ ಬುದ್ಧ ದತ್ತೋಪಂತ್ ತೇಂಗಡಿ

ಗ್ರಹಿಕೆಯ ಹಿಂದೂ ಧರ್ಮ ಬೇರೆಯಾಗಿದೆ ಎಂದು ತಿಳಿಯಲು ಸಾಧ್ಯವಾಗದೆ ಈ ವಾಗ್ವಾದ ಹುಟ್ಟಿ ಬೆಳೆಯಿತೇ? ಹಾಗೆ ಹೇಳಿದರೆ, ಇಬ್ಬರ ಸಂವೇದನಾಶೀಲತೆಗೂ ಮಾಡುವ ಅವಮಾನ ಮಾತ್ರವಲ್ಲದೆ ಧರ್ಮದ ಅರ್ಥವನ್ನು ಜಾತಿಗೆ ಕುಗ್ಗಿಸುವ ಪ್ರಯತ್ನವಾಗುತ್ತದೆ. ಆದರೆ ಅಂಬೇಡ್ಕರ್ ಹಿಂದೂ ಧರ್ಮವೆಂಬುದು ಜಾತಿ ವ್ಯವಸ್ಥೆಯೆಂಬ ಲೌಕಿಕ ವ್ಯವಸ್ಥೆಯಾಗಿ ಕುಗ್ಗಿಹೋಗಿ ತನ್ನೆಲ್ಲ ಪಾರಮಾರ್ಥಿಕತೆಯನ್ನು ಕಳೆದುಕೊಂಡಿದೆ ಎಂಬ ತೀರ್ಮಾನಕ್ಕೆ ಬಂದಿದ್ದರು. ಆದರೆ ಗಾಂಧಿ ಹಿಂದೂ ಧರ್ಮ ಜಾತಿ ವ್ಯವಸ್ಥೆಯನ್ನು ಮೀರಿದ್ದು ಮತ್ತು ಅದರ ಮೌಲ್ಯಗಳು ಸನಾತನವಾಗಿದ್ದು, ಅದು ಒಂದು ಪ್ರಾಚೀನ ನಾಗರೀಕತೆಯಾಗಿಯೂ ವಿಕಾಸಗೊಳ್ಳುತ್ತಾ ಅನ್ಯ ಪ್ರಭಾವಗಳನ್ನು ಹೀರಿಕೊಂಡು ಜೀವನದ ಅರ್ಥವನ್ನು ಶೋಧಿಸಲು ಸಾಧ್ಯ ಮಾಡುವ ಒಂದು ಸೃಜನಶೀಲ ಮಾಧ್ಯಮವಾಗಿದೆ ಎಂದು ನಂಬಿದ್ದರು. ಹಾಗಾಗಿಯೇ ಅವರ ಇಡೀ ಬದುಕು ಅದರ ಅರ್ಥ ಕಂಡುಕೊಳ್ಳುವ ನಿಜವಾದ ಧಾರ್ಮಿಕ ಪ್ರಯಾಣವೇ ಆಗಿತ್ತು. 'ಸತ್ಯದೊಡನೆ ಪ್ರಯೋಗ'ವೆಂಬ ಈ ಮಹಾ ಪ್ರಯಾಣದ ಆರಂಭದ ಘಟ್ಟದಲ್ಲೇ –ಅಂಬೇಡ್ಕರ್ ಸಾರ್ವಜನಿಕ ಜೀವನವನ್ನು ಪ್ರವೇಶಿಸುವ ಬಹುಮುನ್ನವೇ– ಅವರು ಅಸ್ಪೃಶ್ಯತೆಯನ್ನು ಒಂದು 'ಮಹಾ ಪಾಪ' ಎಂದು ಪರಿಗಣಿಸಿದ್ದರು ಎಂಬುದು ಇಲ್ಲಿ ಮುಖ್ಯ.

ಹತ್ತೊಂಬತ್ತನೇ ಶತಮಾನದ ಮೊದಲ ದಶಕದಲ್ಲೇ, ದ.ಆಫ್ರಿಕಾದಲ್ಲಿ ಭಾರತೀಯರ ಪರವಾಗಿ ನಡೆಸಿದ ಹೋರಾಟದ ಸಂದರ್ಭದಲ್ಲಿ ಗಾಂಧಿ ಅಲ್ಲಿನ ಭಾರತೀಯರಿಗೆ ಕಟುವಾಗಿ ಹೇಳಿದ್ದರು, 'ವರ್ಣಭೇದ ವಿರೋಧಿಸುವವರು ಅಸ್ಪೃಶ್ಯತೆಯನ್ನೂ ಆಚರಿಸಬಾರದು' ಎಂದು. ಅಸ್ಪೃಶ್ಯತೆಯನ್ನು ಅವರು ಆಗಲೇ ಎಂತಹ ಮಹಾಪರಾಧವೆಂದು ಪರಿಗಣಿಸಿದ್ದರೆಂದರೆ, ತಮ್ಮ ಪತ್ನಿ ಅಸ್ಪೃಶ್ಯನೊಬ್ಬನ ಶೌಚವನ್ನು ಸ್ವಚ್ಛಗೊಳಿಸಲು ನಿರಾಕರಿಸಿದಾಗ ಆಕೆಯನ್ನು ಮನೆಯಿಂದಲೇ ಹೊರದೂಡುವ (ಅವಿವೇಕದ) ಪ್ರಯತ್ನ ಮಾಡಿ ನಾಚಿಕೆಪಟ್ಟುಕೊಳ್ಳಬೇಕಾಯಿತು. ದ.ಆಫ್ರಿಕಾದಿಂದ ಹಿಂದಿರುಗಿ ಭಾರತದ ಸ್ವಾತಂತ್ರ್ಯ ಹೋರಾಟದ ವೇದಿಕೆಯನ್ನು ಹತ್ತುವ ಮುನ್ನವೇ ಅವರು 'ಈ ಪವಿತ್ರ ಭೂಮಿಯಲ್ಲಿ ನಾವು ಎದುರಿಸುತ್ತಿರುವ ಎಲ್ಲ ಸಂಕಷ್ಟಗಳಿಗೆ ಅಸ್ಪೃಶ್ಯತೆಯ ಹೆಸರಿನಲ್ಲಿ ನಾವು ನಮ್ಮ ಸೋದರ–ಸೋದರಿಯರ ಮೇಲೆ ಎಸಗುತ್ತಿರುವ ಅನ್ಯಾಯಗಳೇ ಕಾರಣ ಎಂದು ಘೋಷಿಸಿದ್ದರು. (*ಗಾಂಧಿ ಸಮಗ್ರ ಸಾಹಿತ್ಯ::೧೩:೨೩೨*) ಮುಂದುವರೆದು ಅವರು ಹೇಳಿದ್ದರು, 'ನನಗೆ ನಾನೇ ಗುರು... ಮನುಸ್ಮೃತಿ ಮತ್ತಿತರ ಗ್ರಂಥಗಳಿಂದ ಉಲ್ಲೇಖ ಮಾಡಿ ಈ ಪಾಪವನ್ನು ಸಮರ್ಥಿಸಿ ಪ್ರಯೋಜನವಿಲ್ಲ. ಈ ಗ್ರಂಥಗಳ ಹಲವು ಸಾಲುಗಳು ಪ್ರಕ್ಷಿಪ್ತ ಅಥವಾ ಅರ್ಥಹೀನವಾಗಿವೆ'(*ಗಾಂ.ಸ.ಸಾ.:೧೪:೭೩*) ಅಷ್ಟೇ ಅಲ್ಲ, ಮುಂದೆ ಅಹಮದಾಬಾದ್‌ನಲ್ಲಿ ತಾವು ಸ್ಥಾಪಿಸಿದ ಸಾಬರ್ಮತಿ ಆಶ್ರಮದಲ್ಲಿ ಅಸ್ಪೃಶ್ಯ ಕುಟುಂಬವೊಂದು ನೆಲೆಸಲು ಅವಕಾಶ ಮಾಡಿಕೊಟ್ಟು ಆ ಕುಟುಂಬದ ಹೆಣ್ಣುಮಗುವೊಂದನ್ನು ದತ್ತುಮಗಳಾಗಿ ಸ್ವೀಕರಿಸಿದರು. ಇದಕ್ಕೆ ಸಾರ್ವಜನಿಕರು ತೀವ್ರ ವಿರೋಧ ವ್ಯಕ್ತಪಡಿಸಿ ಆ ಅಸ್ಪೃಶ್ಯ ಕುಟುಂಬವನ್ನು ಹೊರಹಾಕದ ಹೊರತು ಆಶ್ರಮಕ್ಕೆ ದೇಣಿಗೆ ಕೊಡುವುದನ್ನು ನಿಲ್ಲಿಸುವುದಾಗಿ ಬೆದರಿಸಿದರು.. ಈ ಬೆದರಿಕೆಗೆ ಮಣಿಯದ ಗಾಂಧಿ ಆಶ್ರಮವನ್ನು ಮುಚ್ಚುವ ಸ್ಥಿತಿ ಬಂದರೂ ಆ ಕುಟುಂಬವನ್ನು ತಮ್ಮೊಡನೆ ಇರಿಸಿಕೊಂಡರು. ಆ ಹೊತ್ತಿನಲ್ಲಿ ದೈವವೇ ಗಾಂಧಿಯ ನೆರವಿಗೆ ಬಂದಂತೆ ಅಪರಿಚಿತ ಶ್ರೀಮಂತನೊಬ್ಬ ಬಂದು ಒಂದು ದೊಡ್ಡ ದೇಣಿಗೆ ನೀಡಿ ಆಶ್ರಮ ಮುಚ್ಚದಂತೆ ನೋಡಿಕೊಂಡ ಎಂಬುದು ಬೇರೆ ಮಾತು.

ಇಂತಹ ನುಡಿ–ನಡೆಗಳಿಗಾಗಿ ಗಾಂಧಿ ತಮ್ಮ ಜೀವನದಲ್ಲಿ ಹಲವು ಬಾರಿ ದಾಳಿ ಮತ್ತು ಹತ್ಯೆಯ ಪ್ರಯತ್ನಗಳನ್ನು ಎದುರಿಸಬೇಕಾಗಿ ಬಂದು, ಕೊನೆಗೆ ಈ ಅಸ್ಪೃಶ್ಯತಾ ನಿವಾರಣೆಯ ಜೊತೆಗೇ ತಮ್ಮ ಜೀವನೋದ್ದೇಶಗಳಲ್ಲಿ ಒಂದನ್ನಾಗಿ ಮಾಡಿಕೊಂಡಿದ್ದ ಹಿಂದೂ–ಮುಸ್ಲಿಂ ಐಕ್ಯತೆಯ ಆದರ್ಶಕ್ಕಾಗಿ ತಮ್ಮ ಪ್ರಾಣವನ್ನೇ ತೆರಬೇಕಾಯಿತು. ಇಲ್ಲಿಯೇ ಗಾಂಧಿ ಮತ್ತು ಅಂಬೇಡ್ಕರ್ ನಡುವಣ ಮುಖ್ಯ ವ್ಯತ್ಯಾಸ ಸ್ಪಷ್ಟವಾಗುವುದು. ಇದಕ್ಕೊಂದಿಷ್ಟು ವಿವರಣೆ ಬೇಕು:

ಗಾಂಧಿ ಅಸ್ಪೃಶ್ಯತಾ ನಿವಾರಣೆ, ಹಿಂದೂ ಮುಸ್ಲಿಂ ಐಕ್ಯತೆ ಮತ್ತು ಸ್ವದೇಶಿ –ಈ ಮೂರನ್ನು ಒಂದು ಬಿಟ್ಟು ಇನ್ನೊಂದಿಲ್ಲ ಎಂಬಂತೆ ತಮ್ಮ ಬದುಕಿನ ಹೋರಾಟದ ಪ್ರಾಣ ನೆಲೆಗಳನ್ನಾಗಿ ಮಾಡಿಕೊಂಡಿದ್ದರು. ಅದು ಅವರ ಹಿಂದೂ ಧರ್ಮ. ಪೂನಾ ಒಪ್ಪಂದದ ನಂತರ ಅಂಬೇಡ್ಕರ್, ಗಾಂಧಿ ವ್ಯಕ್ತಿತ್ವದಿಂದ ಎಷ್ಟು ಪ್ರಭಾವಿತರಾಗಿದ್ದರೆಂದರೆ, ಅವರು 'ನೀವು ಅಸ್ಪೃಶ್ಯತಾ ನಿವಾರಣೆಗೇ ನಿಮ್ಮನ್ನು ಅರ್ಪಿಸಿಕೊಳ್ಳುವುದಾದರೆ ನಾನು ನಿಮ್ಮ ಅನುಯಾಯಿಯಾಗುವೆ' ಎಂದು ಹೇಳಿದಾಗ, ಗಾಂಧಿ ವಿರುದ್ಧದ ಅವರೆಗಿನ ಅಂಬೇಡ್ಕರ್ ದಾಳಿಯಿಂದ ವಿಚಲಿತರಾಗಿದ್ದ ಗಾಂಧಿ ಮಿತ್ರ ಆಂಡ್ರ್ಯೂಸ್ ಅಂಬೇಡ್ಕರ್‌ರ ಆಹ್ವಾನವನ್ನು ಒಪ್ಪಿಕೊಳ್ಳಬಾರದೇಕೆ ಎಂದು ಗಾಂಧಿಯನ್ನು ಕೇಳಿದರು. ಆಗ ಗಾಂಧಿ ಆತನಿಗೆ ಬರೆದದ್ದು ಹೀಗೆ: 'ನನ್ನ ಬದುಕೆನ್ನುವುದು ಒಂದು ಅವಿಭಾಜ್ಯ ಅಖಂಡ ಸಂಗತಿ. ಅದನ್ನು ವಿಭಾಗಿಸಲಾಗದು. ಅಸ್ಪೃಶ್ಯತಾ ನಿವಾರಣೆಯ ನನ್ನ ಪ್ರಯತ್ನಗಳು ನಾಗರೀಕ ಅಸಹಕಾರ, ಹಿಂದೂ ಮುಸ್ಲಿಂ ಐಕ್ಯತೆ ಮತ್ತು ಸ್ವದೇಶಿಗಳ ಜೊತೆಗೇ ಇರುವಂತಹದ್ದು. ನನ್ನ ಬದುಕಿನಲ್ಲಿ ಒಮ್ಮೆ ಅದಕ್ಕೆ ಪ್ರಾಧಾನ್ಯತೆ, ಇನ್ನೊಮ್ಮೆ ಇದಕ್ಕೆ ಪ್ರಾಧಾನ್ಯತೆ, ಮತ್ತೊಮ್ಮೆ ಇನ್ನೊಂದಕ್ಕೆ ಪ್ರಾಧಾನ್ಯತೆ ಇರುವುದನ್ನು ನೀನು ಕಾಣಬಹುದು. ಇದೆಲ್ಲ ಪಿಯಾನೋ ಮೇಲಿನ ಸ್ವರಮೇಳದಂತೆ: ಒಂದಕ್ಕೊಂದು ಕೂಡಿಕೊಂಡಿರುವಂತೆಯೇ ಒಮ್ಮೆ ಆ ಸ್ವರಕ್ಕೆ ಒತ್ತು, ಒಮ್ಮೆ ಈ ಸ್ವರಕ್ಕೆ ಒತ್ತು...ಹೀಗೇ...'

ಗಾಂಧಿಗೆ ಹಿಂದೂ ಧರ್ಮ ಬೇರೆಯಾಗಿರಲಿಲ್ಲ, ಇಸ್ಲಾಂ ಅಥವಾ ಕ್ರಿಶ್ಚಿಯನ್ ಧರ್ಮ ಬೇರೆಯಾಗಿರಲಿಲ್ಲ. ಇಂತಹವು ಎಷ್ಟೋ ಹೇಗೋ ಸೇರಿಯೇ ಬದುಕೆಂಬ ಸ್ವರಮೇಳ ಸೃಷ್ಟಿಯಾಗಿ ಬದುಕು ದಿವ್ಯವೆನಿಸಿಕೊಳ್ಳುವುದು. ಮುಖ್ಯ ಅಂದರೆ ಅಂದಂದಿಗೆ ಆ ಸ್ವರಮೇಳವನ್ನು ಸೃಷ್ಟಿಸಬೇಕಾದವರು ನಾವು. ಜೊತೆಯಾಗಿ. ಏಕೆಂದರೆ, ಬದುಕಿನ ಸ್ವರಮೇಳಕ್ಕೆ ಎಂದೂ ಪೂರ್ವಸಿದ್ಧ ಸ್ವರಪ್ರಸ್ತಾರವಿಲ್ಲ. ಆದರೆ ಅಂಬೇಡ್ಕರ್ ಹಿಂದೂ ಧರ್ಮವನ್ನು ಅಂತಹ ಒಂದು ಬದುಕಿನ ಪೂರ್ವಸಿದ್ಧ ಅಚ್ಚಿನಲ್ಲಿ ಕಾಣಲು ಹೋಗಿ ನಿರಾಶರಾದರು; ಕ್ರುದ್ಧರಾದರು. ಜೊತೆಗೆ ಆ ಅಚ್ಚಿಗೆ ಪ್ರತಿಕ್ರಿಯೆಯಾಗಿ ತಮ್ಮದೇ ರಾಜಕಾರಣವನ್ನೂ ಕಟ್ಟಿಕೊಂಡಿದ್ದರು. ಆ ಕ್ರುದ್ಧತೆಯಲ್ಲಿ ಮತ್ತು ತಮ್ಮ ಆ ರಾಜಕಾರಣ ಮತ್ತೆ ಮತ್ತೆ ಎದುರಿಸುತ್ತಿದ್ದ ಸೋಲುಗಳ ಹತಾಶೆಯಲ್ಲಿ ಅವರು ಗಾಂಧಿ ವಿರೋಧಿಗಳಾಗಿದ್ದ ಎಲ್ಲರೊಂದಿಗೆ– ಬ್ರಿಟಿಷರೊಂದಿಗೆ, ಹಿಂದೂಗಳೊಂದಿಗೆ, ಮಾರ್ಕ್ಸ್‌ವಾದಿಗಳೊಂದಿಗೆ– ಸಂದರ್ಭಾನುಸಾರ ಒಡನಾಡಿದರು. ಇಂದಿನ ಅಂಬೇಡ್ಕರ್ ವಾರಸುದಾರಿಕೆ ಅಥವಾ ಪುನರನ್ವೇಷಣೆಯಲ್ಲಿ ಎದುರಾಗುವ ಎಲ್ಲ ವಿರೋಧಾಭಾಸಗಳಿಗೆ, ವಿಪರ್ಯಾಸಗಳಿಗೆ ಇದೇ ಕಾರಣವಾಗಿದೆ.

ಹಾಗಾಗಿ ಇಂದು ಅಂಬೇಡ್ಕರ್‌ರನ್ನು ಅವರು ಯಾವ ಉನ್ನತ ಮಾನವೀಯ ಮೌಲ್ಯಗಳಿಗಾಗಿ ಹೋರಾಟ ಮಾಡಿದರೋ–ಆ ಹೋರಾಟ ತನ್ನ ಕ್ರುದ್ಧತೆಯಿಂದಾಗಿ ಹಲವು ಬಾರಿ ದಾರಿ ತಪ್ಪಿದ್ದರೂ–ಆ ಮೌಲ್ಯಗಳನ್ನು ಪುನರ್‌ಸ್ಥಾಪಿಸಬಯಸುವವರು, ಅವರನ್ನು ಪುನರನ್ವೇಷಿಸಬೇಕಾಗಿರುವುದು ಅವರು ಗಾಂಧಿಯೊಂದಿಗೆ ನಡೆಸಿದ ವಾಗ್ವಾದದ ಪರಿಪ್ರೇಕ್ಷ್ಯದಲ್ಲೇ; ಆ ವಾಗ್ವಾದ ಏಕೆ ಮತ್ತು ಎಲ್ಲಿ ಹಳಿ ತಪ್ಪಿತು ಎಂಬುದರ ವಸ್ತುನಿಷ್ಠ ಪರಿಶೀಲನೆಯ ಮೂಲಕವೇ. ಈ ಪರಿಶೀಲನೆಯ ಸಂದರ್ಭದಲ್ಲಿ, ಇಂದಿನ ರಾಜಕಾರಣದ ತುರ್ತು ಅಗತ್ಯಗಳಿಗೆ ಅಂಬೇಡ್ಕರ್ ಒದಗುವಷ್ಟು ಸುಲಭವಾಗಿ ಗಾಂಧಿ ಒದಗುವುದಿಲ್ಲ ಮತ್ತು ಅಂಬೇಡ್ಕರ್ ಬಹುಕಾಲ ಕಾದು ಕೊನೆಗೆ ಬೌದ್ಧ ಧರ್ಮವನ್ನು ಅಪ್ಪಿಕೊಂಡ ರೀತಿ–ನೀತಿ ಕೇವಲ ಸಾಂಕೇತಿಕ ಅರ್ಥ ಪಡೆದಿದ್ದು, ಅದು ಮಾರ್ಕ್ಸ್‌ವಾದಿಗಳ ಭೌತಿಕತೆ ಮತ್ತು ಸಂಘ ಪರಿವಾರದವರ ಆಸ್ತಿಕತೆ ಈ ಎರಡರ ವ್ಯಾಖ್ಯಾನಗಳಿಗೂ ಒದಗಬಲ್ಲುದಾಗಿದೆ ಎಂಬುದನ್ನೂ (ಹಾಗಾಗಿಯೇ ಬಹುಶಃ ಅಂಬೇಡ್ಕರ್ ಬೌದ್ಧ ಧರ್ಮ ಕುರಿತು ಮಾಡಿದ ವ್ಯಾಖ್ಯಾನವನ್ನು ಬಹುತೇಕ ಬೌದ್ಧ ವಿದ್ವಾಂಸರು ಒಪ್ಪಲಿಲ್ಲ ಎಂದು ಹೇಳಲಾಗುತ್ತದೆ) ನೆನಪಿನಲ್ಲಿಟ್ಟುಕೊಂಡಿರಬೇಕು.

ಇಲ್ಲಿನ 'ಸಮಕಾಲೀನ' ಪುಟಗಳ ಮುಂದಿನ ಬರಹಗಳು ಮೇಲಿನ ಈ ಎಲ್ಲ ಸಂಗತಿಗಳ ಮೇಲೂ ಹೆಚ್ಚಿನ ಬೆಳಕನ್ನು ಚೆಲ್ಲುವಂತಹವಾಗಿದ್ದು, ಗಂಭೀರ ಓದಿಗೆ ಒದಗಬೇಕಾಗಿದೆ. ಓದಿ ಬರೆಯಿರಿ. –ಸಂಪಾದಕ

# ಹುಟ್ಟು ಅಸ್ಪೃಶ್ಯತೆಯೂ, ಆಯ್ಕೆಯ ಅಸ್ಪೃಶ್ಯತೆಯೂ...

–ಲಕ್ಷ್ಮೀಶ ತೋಳ್ಪಾಡಿ



"ನಾನು ಹಿಂದೂ ಆಗಿ ಹುಟ್ಟಿದ್ದೇನೆ; ಆದರೆ ಹಿಂದೂ ಆಗಿ ಸಾಯಲಾರೆ" – ಎಲ್ಲರ ಎದೆ ಹಿಂಡುವ ಬಾಬಾ ಸಾಹೇಬ್ ಅಂಬೇಡಕರರ ಈ ಮಾತು, ಹಿಂದೂಗಳು ತಮ್ಮ ವಿಮರ್ಶೆಗೆ ನಿರಂತರ ಒಡ್ಡಿಕೊಳ್ಳಬೇಕಾದ, ಒಡ್ಡಿಕೊಂಡರೆ ಉದ್ಧಾರವಾಗಬಹುದಾದ ಬೀಜವಾಕ್ಯವಾಗಿದೆ. ಅಂಬೇಡ್ಕರ್ ಒಂದು ಮಂತ್ರದಂತೆ ಈ ಮಾತನ್ನು ಕೊನೆಯ ಬಾರಿಗೆ ಉಪದೇಶ ಮಾಡಿ ತಾವು ಬುದ್ಧನತ್ತ ನಡೆದರು ಎಂದುಕೊಳ್ಳುತ್ತೇನೆ. ಆದರೆ ಚರಿತ್ರೆಯ ಅಂತಃಶಕ್ತಿಯನ್ನು ನಾವು ನಂಬುವುದಾದರೆ, ಯಾರನ್ನು ತನ್ನ ಕಾಲದ–ಪ್ರಾಯ: ಎಲ್ಲ ಕಾಲದ–ಮಹೋನ್ನತ ಹಿಂದೂ ಎಂದು ಲೋಕವು ಕರೆಯಿತೋ ಅಂಥ ಮಹಾತ್ಮಾ ಗಾಂಧಿ ಸಾಯದಂತೆ ಕೊನೆಗೂ ನೋಡಿಕೊಂಡದ್ದು ತಾನು ಹಿಂದೂ ಆಗಿ ಸಾಯಲಾರೆನೆಂದ ಅಂಬೇಡ್ಕರ್! ಪುಣೆ ಒಪ್ಪಂದದ ಸಂದರ್ಭವಿದು. ಅಂಬೇಡ್ಕರ್ ಹಾಗೆ ಹೇಳಿದ್ದು ಪುಣೆ ಒಪ್ಪಂದ ಏರ್ಪಟ್ಟ ನಾಲ್ಕು ವರ್ಷಗಳ ಮೇಲಾದರೂ, ಮತಾಂತರಗೊಳ್ಳುವ ಇಚ್ಛೆ ಬಾಬಾ ಸಾಹೇಬರಲ್ಲಿ ಈ ಮೊದಲೇ ಉಂಟಾಗಿತ್ತು. ಅಂಬೇಡ್ಕರ್ ಜೀವನ ಚರಿತ್ರೆಯನ್ನು ಬರೆದ ಧನಂಜಯ ಕೀರ್, ಪುಣೆ ಒಪ್ಪಂದದ ಈ ಸಂದರ್ಭವನ್ನು ಮನಕಲಕುವಂತೆ ಚಿತ್ರಿಸಿದ್ದಾರೆ. ಪಂಡಿತ ಮಾಲವೀಯರಿಂದ ಹಿಡಿದು ದೇವದಾಸ್ ಗಾಂಧಿಯವರೆಗೆ–ಮಹಾತ್ಮರ ಪ್ರಾಣವನ್ನುಳಿಸುವುದು ನಿಮ್ಮ ಕೈಯಲ್ಲಿದೆ ಎಂದು ಅಂಬೇಡ್ಕರ್‌ರನ್ನು ಕೇಳಿಕೊಳ್ಳಲಾಗಿತ್ತು. ಸ್ವಯಂ ಗಾಂಧಿ ಈ ಮಾತು ಹೇಳಿದ್ದರು– ಭಾವುಕತೆಯನ್ನು ಮೀರಿದ ಅರ್ಥದಲ್ಲಿ.

ಇದೇ ಸಂದರ್ಭದಲ್ಲಿ ಗಾಂಧಿ ಅಂಬೇಡ್ಕರ್ ಜತೆ ಆಡಿದ ಮಾತು – "ನೀವು ಹುಟ್ಟಿನಿಂದ ಅಸ್ಪೃಶ್ಯರು; ನಾನು ಆಯ್ಕೆಯಿಂದ ಅಸ್ಪೃಶ್ಯನಾಗಿದ್ದೇನೆ"– ಗಾಂಧಿ ಆಡಿದ ಬೀಜ ಮಾತು! ನಾನು ಹಿಂದೂ ಆಗಿ ಸಾಯಲಾರೆನೆನ್ನುವ ಮನೋಧರ್ಮದ ಇನ್ನೊಂದು ಮುಖ – ಅದಕ್ಕಿಂತಲೂ ಉತ್ಕಟವೂ ಆಳವೂ ಆದ ಮುಖ–ಇದು. ಸಾಮಾಜಿಕ ವ್ಯವಸ್ಥೆಯೊಂದರಲ್ಲಿ ಕೀಳರಿಮೆಗೆ ಒಳಗಾದ ಮನಸ್ಸೊಂದು ಸ್ವಾಭಿಮಾನದಿಂದ ಸಿಡಿದೇಳುವುದು ಹೇಗೆ ನಾಗರಿಕತೆಯ ಮುನ್ನಡೆಗೆ ಕಾರಣವೋ ಮತ್ತು ಅವಶ್ಯವೋ, ಹಾಗೆಯೇ ಕೀಳರಿಮೆಗೆ ಒಳಗಾದವರ ಜತೆ ಪ್ರಜ್ಞಾಪೂರ್ವಕವಾಗಿ ತನ್ನನ್ನು ಗುರುತಿಸಿಕೊಂಡು ಈ ವ್ಯವಸ್ಥೆಯ ವಿರುದ್ಧ ಹೋರಾಡುವುದು; ನಾಗರಿಕತೆಯನ್ನು ಕೀಳರಿಮೆ–ಮೇಲರಿಮೆಗಳ, ಅಭಿಮಾನ ಶೂನ್ಯತೆ ಮತ್ತು ಸ್ವಾಭಿಮಾನ ಗಳಿಕೆಯ ಪ್ರಶ್ನೆಗಳ ಸುಳಿಯಿಂದಲೇ ಮೇಲೆತ್ತಿದಂತೆ. ಇಡಿಯ ನಾಗರಿಕತೆಯನ್ನೇ ನಿರ್ಮಮವಾಗಿ ವಿವೇಚನೆ ಮಾಡಬಲ್ಲ ಹೊಸಸ್ತರವೊಂದನ್ನು ಶೋಧಿಸಿದಂತೆ.

ಸ್ವಾಭಿಮಾನದ ಪ್ರಶ್ನೆಗಳು ಮುಖ್ಯವೇನೋ ಹೌದು. ಆದರೆ ಈ ಪ್ರಶ್ನೆಗಳಿಗೆ ವಿಧಾಯಕ ಉತ್ತರಗಳನ್ನು ಕಂಡುಕೊಳ್ಳುವ ರೂಪದ ಹೋರಾಟವು ಇದಕ್ಕಿಂತಲೂ ಮುಖ್ಯವಾದ ಪ್ರಶ್ನೆಗಳನ್ನು, ಇಡಿಯ ಮನುಷ್ಯ ನಾಗರಿಕತೆಯನ್ನೇ ಆಧ್ಯಾತ್ಮಿಕ ದೃಷ್ಟಿಕೋನದಿಂದಲೂ–ಕೇವಲ ಲೌಕಿಕ ದೃಷ್ಟಿಕೋನದಿಂದ ಅಲ್ಲ – ನೋಡುವುದಕ್ಕೆ ನೆರವಾಗಬೇಕು. ಅಥವಾ ಸ್ವಾಭಿಮಾನದ ಪ್ರಶ್ನೆಯು ಇನ್ನಷ್ಟು ಆಳವಾಗಿ ಮನುಷ್ಯನ ಆತ್ಯಂತಿಕ ನಿಜ ಏನು ಎಂಬ "ಸತ್ಯ–ಶೋಧನೆ"ಯಾಗಿ, 'ಸ್ವ' ಎಂದರೇನು ಎಂಬ ಶೋಧನೆಯಾಗಿ ಬೆಳೆಯಬೇಕು. ಆಯ್ಕೆಯಿಂದ ನಾನು ಅಸ್ಪೃಶ್ಯ ಎನ್ನುವ ಮಾತು, ಅಸ್ಪೃಶ್ಯತೆಯ ವಿರುದ್ಧದ ಹೋರಾಟದ ಜತೆಗೆ, ಈ ವಿಸ್ತಾರವನ್ನೂ ಈ ಬೆಳವಣಿಗೆಯನ್ನೂ ತನ್ನೊಡಲಲ್ಲಿ ಸಹಜವಾಗಿ ಇಟ್ಟುಕೊಂಡಿದೆ. ಅಂದರೆ ತತ್ಕಾಲದ ಪ್ರಶ್ನೆಗಳು ತಮ್ಮ ಮೊನಚನ್ನು ಕಳೆದುಕೊಳ್ಳದೆ ಸಾರ್ವಕಾಲಿಕ ಪ್ರಶ್ನೆಗಳತ್ತ ಒಯ್ಯುತ್ತವೆ – ಗಾಂಧಿಯಲ್ಲಿ. ನಾಗರಿಕ ಹೋರಾಟವೊಂದು ನಾಗರಿಕತೆಯನ್ನೇ ವಿಮರ್ಶೆಗೆ ಒಡ್ಡಿ ಹೊಸ ನಾಗರಿಕತೆಯೊಂದರ ಸೃಷ್ಟಿಯ ದಿಕ್ಕಿನತ್ತ ಒಯ್ಯುತ್ತದೆ–ಗಾಂಧಿಯಲ್ಲಿ.



ಆಯ್ಕೆಯಿಂದ ನಾನು ಅಸ್ಪೃಶ್ಯ ಎನ್ನುವ ಮಾತು ಸಮಾಜದ ತಥಾಕಥಿತ ಆಯ್ಕೆಗಳನ್ನೆಲ್ಲ ನಿಸ್ತೇಜವನ್ನಾಗಿ ಮಾಡುವಂಥದು. ನಮ್ಮ ಗತಕಾಲವೊಂದು ಅದ್ಭುತ; ಎಲ್ಲರೂ ಬ್ರಾಹ್ಮಣರಾಗಬೇಕೆನ್ನುವವರು ಕೆಲವರು. ಗತಕಾಲವೊಂದು ನರಕ; ಎಲ್ಲರೂ ಈಗಿಂದೀಗಲೇ ಆಧುನಿಕರಾಗಬೇಕೆನ್ನುವವರು ಕೆಲವರು. ವಿಜ್ಞಾನವೇ ತಾರಕ; ಪಶ್ಚಿಮವೇ ತಾರಕ ಎನ್ನುವವರು ಕೆಲವರು. ಪೂರ್ವ ಪಶ್ಚಿಮಗಳ ಕೊಳುಕೊಡೆಯ ಮಧ್ಯಮ ಮಾರ್ಗದ ಕಾಣ್ಕೆಯೇ ಮುಖ್ಯ ಎನ್ನುವವರು ಕೆಲವರು. ಈ ಎಲ್ಲ ದೃಷ್ಟಿಕೋನಗಳನ್ನು ಬೇಕಾದಂತೆ; ಬೇಕಷ್ಟು ಉಪಯೋಗಿಸಿಕೊಂಡು ನಾವೊಂದು ಬಲಿಷ್ಠ ರಾಷ್ಟ್ರವಾಗಬೇಕೆನ್ನುವವರು ಕೆಲವರು. ರಾಷ್ಟ್ರವು ಬಲಿಷ್ಠವಾಗುವುದೇ ಧರ್ಮದ ಸಂದೇಶ ಎನ್ನುವವರು ಕೆಲವರು. ಈ ಎಲ್ಲ ಆಯ್ಕೆಗಳ ಚರ್ಚೆ ಈಗ ಬೇಕಿಲ್ಲ. ಆದರೆ ಈ ಎಲ್ಲದರ ನಡುವೆ, ಸಹಜೀವಿಯ ಸಂಕಟವನ್ನು ತನ್ನ ಸಂಕಟವೆಂದೇ ಬಗೆಯುವ, ಆ ಮೂಲಕ ತನ್ನನ್ನೇ ಮೀರುವ, ಮಾನವೀಯತೆಯ ಸಾಧನೆಯು ಈ ಎಲ್ಲ ಉದ್ದೇಶಗಳನ್ನು ಒಳಗಿಂದ ನೋಡಬಲ್ಲದ್ದಾಗಿ, ನೋಡಿ ಬೆಲೆ ಕಟ್ಟಬಲ್ಲದ್ದಾಗಿ, ನಮ್ಮ ಚಿಂತನೆಯ ಜಾಡನ್ನೇ ಬದಲಿಸಬಲ್ಲುದು. ನಾಗರಿಕತೆಗೆ ಹೊಸದಿಕ್ಕನ್ನೇ ಹೊಳೆಯಿಸಬಲ್ಲುದು. ಒಳಗಿಂದ ನೋಡುವ ಅನುಕೂಲವಿಲ್ಲದಿದ್ದರೆ ನಿಜವು ನಿಚ್ಚಳವಾಗದು. ಹೊಸ ಚಿಂತನೆಗಳೇ ಹೊಳೆಯವು. ಮನುಷ್ಯನಿಗಿರುವ– ಇದೆ ಎಂದು ಭಾವಿಸಿರುವ–ಆಯ್ಕೆಯ ಸ್ವಾತಂತ್ರ್ಯವು ಕೃತಾರ್ಥವಾಗುವುದು ಸಹಜೀವಿಯ ಸಂಕಟವನ್ನು ಆಯ್ಕೆ ಮಾಡಿದಾಗ. ತಾನು ಅದನ್ನು ಅನುಭವಿಸಿದಾಗ. 'Critical Insider' ಎನ್ನುವ ಮಾತು ಚಿಂತಕರಲ್ಲಿ ಪ್ರಸಿದ್ಧವಾಗಿದೆ. ಆದರೆ ಗಾಂಧಿಯನ್ನು ಅರ್ಥಮಾಡಿಕೊಳ್ಳುವುದಕ್ಕೆ ಈ ಮಾತು ಅಪರ್ಯಾಪ್ತ. ಸಾಲದು. 'Critical Insider'ಗೂ ಒಂದು ಹೆಜ್ಜೆ ಮುಂದೆ ಹೋಗಿ, ಗಾಂಧಿ; Suffering indweller ಆಗಿದ್ದಾರೆ. ನಮ್ಮೊಳಗಿರುವ ದುಃಖಿತ. ನಮಗಾಗಿ ದುಃಖಿತ. ಬರಿಯ ವಿಮರ್ಶೆಯಲ್ಲ. ದುಃಖದ ಅನುಭವ. ಆಯ್ಕೆಯಿಂದ ನಾನು ಅಸ್ಪೃಶ್ಯ ಎನ್ನುವ ಗಾಂಧಿಗೆ Sufferingನ ಮಹತ್ವ ಅದರ ಮೂಲಕವೇ ತಿಳಿದು ಬಿಟ್ಟಿದೆ.

ಆದುದರಿಂದಲೇ ಗಾಂಧಿಯನ್ನು ಕಪ್ಪು–ಬಿಳಿ ತರ್ಕದಲ್ಲಿ ನಾವು ಅರ್ಥಮಾಡಿಕೊಳ್ಳಲಾರೆವು. ಅವರು ಅವಧೂತನಂತೆ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಅವರು ಹೋರಾಡುವರು. ಪ್ರಾಣಪಣ ಇಟ್ಟು ಹೋರಾಡುವರು. ಆದರೆ ಬ್ರಿಟಿಷರು ಅವರ ಶತ್ರುಗಳಲ್ಲ. ನಿಮ್ಮ ಆಳ್ವಿಕೆ ನಮಗೆ ಕೆಟ್ಟದ್ದಾದರೆ ಅದು ನಿಮಗೂ ಕೆಟ್ಟದ್ದೇ. ಈ ಸಾಮ್ರಾಜ್ಯಶಾಹಿ ಮಾನಸಿಕತೆಯಿಂದ ಹೊರಬರುವುದು ನಮ್ಮಷ್ಟೇ ನಿಮಗೂ ಮುಖ್ಯ ಎಂದು ಬ್ರಿಟಿಷರಿಗೆ ಹೇಳಿದ್ದು ಗಾಂಧಿ ಮಾತ್ರ. ಲೌಕಿಕ ತರ್ಕದಲ್ಲಿ ಶತ್ರುಗಳೆಂದು ಪರಿಗಣಿತವಾದವರ ಹಿತವನ್ನು ಬಯಸುವ ಜೀವ ಗಾಂಧಿ. ಆದುದರಿಂದಲೇ, ಗಾಂಧಿ ಹತ್ಯೆಯಾದ ಮೇಲೆ, ಲಾಹೋರಿನ ಪತ್ರಿಕೆಯೊಂದು ಶ್ರದ್ಧಾಂಜಲಿ ಲೇಖನದಲ್ಲಿ ತಮ್ಮ ಜನರ ಒಳಿತಿಗಾಗಿ ಬಲಿದಾನಗೈದ ಮಹಾಪುರುಷರೆಷ್ಟೋ ಮಂದಿ ಇರುವರು. ಆದರೆ ತಮ್ಮ ಶತ್ರುಗಳಿಗೆ ನ್ಯಾಯ ಸಿಗಬೇಕೆಂದು ಬಲಿದಾನಗೈದ ಮಹಾತ್ಮ ಇರುವುದಾದರೆ ಅದು ಒಬ್ಬರೇ. ಗಾಂಧೀಜಿ ಮಾತ್ರ – ಎಂದು ಎದೆಯಾಳದ ಮಾತನ್ನು ಬರೆಯಿತು. ಆದರೆ ಈ ಮಾತೂ ಪೂರ್ತಿ ಸರಿಯಲ್ಲ. ಏಕೆಂದರೆ ಗಾಂಧಿ ಯಾರನ್ನೂ ತಮ್ಮ ಶತ್ರುಗಳೆಂದು ಭಾವಿಸಿದರೇ ಅಲ್ಲ! ಯಾವುದೇ ಹೋರಾಟವು ಸತ್ಯಶೋಧನೆಯ ದಾರಿಯಿಂದ ಕದಲುವುದು ಬೇಡ ಎಂದು ಒತ್ತಾಯಿಸುವುದಕ್ಕಾಗಿ ಅವರು

ತಮ್ಮ ಕೊನೆಯ ಉಪವಾಸ ಸತ್ಯಾಗ್ರಹವನ್ನು ಕೈಗೊಂಡರು. ಅದು ಲೌಕಿಕ ತರ್ಕವನ್ನೊಪ್ಪದ ಆಧ್ಯಾತ್ಮಿಕ ಒಳ ನೋಟವಾಗಿತ್ತು.

ನಾನು ಹಿಂದೂ ಆಗಿ ಸಾಯಲಾರೆನೆಂದ ಬಾಬಾ ಸಾಹೇಬರ ಮಾತಿದೆಯಷ್ಟೆ. ಹಿಂದೂ ಆಗಿ ಸಾಯುವುದು ಹೇಗೆ ಎಂದು ತೋರಿಸಿದ್ದು ಗಾಂಧಿ. ಈ ಮಾತುಕತೆ ನಡೆದದ್ದು ೧೯೪೮ರ ಜನವರಿ ಕೊನೆಯ ವಾರದ ಒಂದು ದಿನ. ಗಾಂಧಿ ಮರಣಕ್ಕಿಂತ ಕೆಲದಿನ ಮೊದಲು. ವಾತಾವರಣ ಬಿಗುವಾಗಿತ್ತು. ಎಲ್ಲೆಡೆ ಆಕ್ರಾಂತ. ರಾಷ್ಟ್ರವಿಭಜನೆಯ ದಳ್ಳುರಿಯ ಹಿನ್ನೆಲೆಯಲ್ಲಿ ಗಾಂಧಿ ದೂಷಣೆಯೂ ಅವ್ಯಾಹತವಾಗಿ ನಡೆದಿತ್ತು. ಯಾರೋ ಗಾಂಧಿಯನ್ನು ಈತನೊಬ್ಬ ಆಷಾಢಭೂತಿ; ಸೋಗಲಾಡಿ ಸಂತ ಎಂದಿದ್ದರು. ಇದಕ್ಕೆ ಗಾಂಧಿ ಸ್ಪಂದನ ಹೀಗಿತ್ತು: "ನಾನು ರೋಗಗ್ರಸ್ತನಾಗಿ, ನಾಲ್ಕು ಗೋಡೆಗಳ ನಡುವೆ ಮರಣಿಸಿದರೆ ನಾನೊಬ್ಬ ಸೋಗಲಾಡಿ ಎಂದು ಧೈರ್ಯದಿಂದ ಸಾರು. ಅಥವಾ ಬಾಂಬ್ ಸ್ಫೋಟದಲ್ಲಿ, ಅಥವಾ ಗುಂಡೆಸತಕ್ಕೆ ಎದೆಯೊಡ್ಡಿ ನಾ ಸತ್ತರೆ, ಮತ್ತು ಸಾಯುವ ಹೊತ್ತಲ್ಲಿ, ಯಾರ ಮೇಲೂ – ಗುಂಡೆಸೆದವನ ಮೇಲೂ – ದ್ವೇಷವಿಲ್ಲದೆ; ಆ ನಿರ್ದ್ವೇಷದ ಸೂಚಕವಾಗಿ ನನ್ನ ನಾಲಗೆಯಲ್ಲಿ ರಾಮನಾಮವಿದ್ದರೆ, ಆಗ ನೀನು ಮಾಡಿನ ಮೇಲೇರಿ ಸಾರಬೇಕು: ಗಾಂಧೀ ಸೋಗಲಾಡಿಯಲ್ಲ; ಗಾಂಧಿ ನಿಜವಾಗಿಯೂ ಮಹಾತ್ಮಾ–ಎಂದು". ತನ್ನನ್ನು ಮಹಾತ್ಮನೆಂದು ಕರೆಯಬೇಕೆಂದು ಗಾಂಧಿಗೆ ಎಳ್ಳಷ್ಟೂ ಆಸೆ ಇರದಿದ್ದರೂ, ಮರಣದ ಹೊತ್ತಿನಲ್ಲಿ ವ್ಯಕ್ತಿಯ ಅಂತರಂಗದ ಸ್ಥಿತಿಯನ್ನು ಅರ್ಥಮಾಡಿಕೊಳ್ಳಬಹುದೆಂದು ಗಾಂಧಿ ಸೂಚಿಸಿದ್ದು ಹೀಗೆ. ಗಾಂಧಿ ಹೇಳಿದ್ದರಲ್ಲಿ ರಾಮನಾಮದ ಮಾತು ಬಂದಿರುವುದರಿಂದ ಹಿಂದೂ ಆಗಿ ಸಾಯುವುದು ಹೇಗೆ ಎಂದು ತೋರಿಸಿದರು ಎಂದು ಬರೆದಿರುವೆ. ಇಡೀ ಪ್ರಕರಣವನ್ನು ಕಪ್ಪು–ಬಿಳಿಯಲ್ಲಿ ವಿಚಾರಮಾಡಿ ತಿಳಿಯಲಾರೆವು ಎಂದಷ್ಟೆ ನಮ್ರವಾಗಿ ನಿವೇದಿಸಬಲ್ಲೆ.

ಬಾಬಾ ಸಾಹೇಬರದಾದರೋ ಮುಖ್ಯವಾಗಿ ವಿಚಾರನಿಷ್ಠವಾದ, ಕ್ರಿಯೆ–ಪ್ರತಿಕ್ರಿಯೆಗಳ ಡಯಲೆಕ್ಟಿಕ್ ಜಾಡಿನಲ್ಲಿ ಸಾಗುವ, ಹೃದಯ ಪರಿವರ್ತನೆಯನ್ನು ಕಥೆಯಲ್ಲಿಯೂ ನಂಬದ, ತರ್ಕಬದ್ಧವಾದ, ತನ್ನ ಜನರನ್ನು ಕೈ ಬಿಡಬಾರದೆನ್ನುವ ಧೀರ ರಾಜತೇಜದ, ಐಹಿಕಾಭ್ಯುದಯಕ್ಕಾಗಿ ತಮ್ಮ ನೆಲೆಯನ್ನೇ ಬದಲಾಯಿಸಬೇಕಾಗಿ ಬಂದರೆ ಹಿಂಜರಿಯಬಾರದೆನ್ನುವ ಲೌಕಿಕ ನಿಷ್ಠ ವ್ಯಕ್ತಿತ್ವ. ಅವರು ಬೌದ್ಧ ಧರ್ಮವನ್ನು ಒಪ್ಪಿದ್ದು ಕೂಡ ಮೂಲತಃ ಅದು ವಿಚಾರನಿಷ್ಠವಾದುದರಿಂದ. ಪರೀಕ್ಷಿಸಿ ಸರಿ ಎಂದು ಕಂಡು ಬಂದರೆ ಮಾತ್ರ ನನ್ನ ಮಾತನ್ನು ಸ್ವೀಕರಿಸಿ – ಎಂದು ಬುದ್ಧ ಹೇಳಿದುದರಿಂದ. ಅದಕ್ಕನುಗುಣವಾಗಿಯೇ, ಬೌದ್ಧ ವಾಙ್ಮಯದಲ್ಲಿ ಬಹುಮುಖ್ಯವಾಗಿ ಪರಿಗಣಿತವಾದ ಕಥೆಯನ್ನೇ ಅಂಬೇಡ್ಕರ್ ಒಪ್ಪುವುದಿಲ್ಲ. ಆ ಕಥೆ – ಮೊದಲ ಬಾರಿಗೆ ನಗರದ ಬೀದಿಯಲ್ಲಿ ರಥವೇರಿ ಸಂಚರಿಸುವಾಗ, ರಾಜಕುಮಾರ, ಓರ್ವ ರೋಗಿ; ಮುದುಕ; ಒಂದು ಶವ; ಓರ್ವ ಸನ್ಯಾಸಿಯನ್ನು ಕಂಡು ಆಳದಲ್ಲಿ ವಿಚಲಿತಗೊಂಡ ಎಂಬ, ಜನಮಾನಸದಲ್ಲಿ ಸೇರಿ ಹೋದ ಕಥೆ. ಅಂಬೇಡ್ಕರ್ ಹೇಳುತ್ತಾರೆ: ಈ ಕಥೆ ತರ್ಕಬದ್ಧವಲ್ಲ. "does not appeal to reason". ಯಾಕೆ ತರ್ಕಬದ್ಧವಲ್ಲ? ಇದು ಅಂಬೇಡ್ಕರ್ ನೀಡುವ ಕಾರಣ: ಇಪ್ಪತ್ತೊಂಭತ್ತು ವರ್ಷಗಳ ತನಕ (ಬುದ್ಧನಿಗೆ ಈ ಅನುಭವವಾಗುವಾಗ ಇಪ್ಪತ್ತೊಂಭತ್ತು ವರ್ಷ) ಓರ್ವ ವ್ಯಕ್ತಿಗೆ ಸಾವಿನ ವಿಷಯ ಯೋಚನೆಯಾಗಿರಲಿಲ್ಲ ಎಂದರೆ ನಂಬಲಾಗದು.

ವಾದವೇನೋ ಸರಿಯಾಗಿದೆ. ಆದರೆ ಎಷ್ಟು ಸಾವನ್ನು ನೋಡಿದರೂ ಯಾರು ಸಾವಿನ ಕುರಿತು ಗಂಭೀರವಾಗಿದ್ದಾರೆ? ಸಾವಿನ ಕುರಿತು ಗಂಭೀರವಾಗುವ ಕ್ಷಣ ಯಾರಿಗೆ, ಯಾವಾಗ, ಎಲ್ಲಿ ಒದಗುತ್ತದೆ ಎಂದು ಯಾರು ಹೇಳಬಲ್ಲರು? ಯಾಕೆ ಬುದ್ಧನಿಗೆ ತನ್ನ ಇಪ್ಪತ್ತೊಂಭತ್ತರ ವಯಸ್ಸಿನಲ್ಲಿ ಸಾವಿನ ಪ್ರಶ್ನೆ ಗಹನವಾಗಿ ತಟ್ಟಬಾರದು? – ತಿಳಿಯದಾಗಿದೆ! ನನಗನ್ನಿಸುವಂತೆ, ಅಂಬೇಡ್ಕರ್‌ಗೆ ಯಾವುದೇ ಪರಿವರ್ತನೆಯನ್ನು ಒಪ್ಪುವುದು ಕಷ್ಟ. ಏಕೆಂದರೆ ಅವರು ಪಟ್ಟಪಾಡು ಅಷ್ಟು ಅಮಾನುಷವಾಗಿತ್ತು; ಯಾತನಾಮಯವಾಗಿತ್ತು. ಅಲ್ಲದೆ ಹಿಂದೂಗಳು ತಮ್ಮ ಧರ್ಮವು ಸನಾತನ ಧರ್ಮ – ಅಂದರೆ ಶಾಶ್ವತ ಧರ್ಮ ಎಂದು ಹೇಳುತ್ತಿರುವುದರಿಂದ ಇಲ್ಲಿ ಪರಿವರ್ತನೆ ಅಸಾಧ್ಯ ಎಂದು ತಾವು ಕಂಡ ಸತ್ಯಕ್ಕೆ; ತಮ್ಮ ಅನುಭವಕ್ಕೆ ಅಂಬೇಡ್ಕರ್ ಸಹಜವಾಗಿ ಬದ್ಧರಾಗಿದ್ದರು. ಆದುದರಿಂದ, ಗಾಂಧಿ ತಾನು ಆಯ್ಕೆಯಿಂದ ಅಸ್ಪೃಶ್ಯ ಎಂದರೆ ಅಂಬೇಡ್ಕರ್ ಈ ಮಾತಿಗೆ ಸ್ಪಂದಿಸುವುದು ಕಷ್ಟವೇ. ಕಷ್ಟವೇ ಆದರೂ, ತಮ್ಮ ಜನಕ್ಕೆ ಒಂದು ತಾಯ್ನಾಡೇ ಇಲ್ಲ ಎನ್ನುವ ಮಟ್ಟಿನ ಬಾಬಾಸಾಹೇಬರ ಖಿನ್ನತೆ; ವಿಷಾದಯೋಗ ಅತ್ಯಂತ ಆಳವಾದುದಾಗಿದ್ದರೂ ಅಂಬೇಡ್ಕರ್ ಆಧ್ಯಾತ್ಮಿಕ ಪರಂಪರೆಯನ್ನು ತಿಳಿಯದವರಾಗಿರಲಿಲ್ಲ. ಅವರ ಮನೆತನ ಕಬೀರ್ ಪಂಥಿಯಾಗಿತ್ತು. ತಮ್ಮ ಮೂವರು ಗುರುಗಳಲ್ಲಿ ಕಬೀರ್ ಒಬ್ಬ ಎಂದು ಅಂಬೇಡ್ಕರ್ ಹೇಳಿದ್ದಾರೆ. (ಉಳಿದ ಇಬ್ಬರು – ಬುದ್ಧ ಮತ್ತು ಜ್ಯೋತಿ ಬಾಪುಲೆ?) ಕಬೀರ್‌ಪಂಥ ಜಾತೀಯತೆಯನ್ನು ತೀವ್ರವಾಗಿ ವಿರೋಧಿಸುವ ಪಂಥ ಎನ್ನುವುದು ವಿದಿತವೇ ಇದೆ. 'ಜ್ಞಾನೇಶ್ವರಿ' ಮುಂತಾದ ಮರಾಠಿ ಸಂತ ಸಾಹಿತ್ಯದ ಪರಿಚಯವೂ ಬಾಬಾಸಾಹೇಬರಿಗೆ ಬಾಲ್ಯದಿಂದಲೇ ಇತ್ತು; ಚೆನ್ನಾಗಿಯೇ ಇತ್ತು. ಅಂಬೇಡ್ಕರ್ ತಾವು ಸ್ಥಾಪಿಸಿದ ಮರಾಠಿ ಪತ್ರಿಕೆ 'ಮೂಕನಾಯಕ'ದ ಮೊದಲ ಸಂಚಿಕೆಯಲ್ಲಿ ಪತ್ರಿಕೆಯ ಧ್ಯೇಯ ವಾಕ್ಯವೆಂಬಂತೆ ಸಂತ ತುಕಾರಾಮರ ಅಭಂಗವೊಂದನ್ನು ಪ್ರಕಟಿಸಿದ್ದರು. "ನಾನೇಕೆ ಹೆದರಲಿ? ನಾನು ಮಾತನಾಡತೊಡಗಿರುವೆ. ನಿಸ್ಸಂದೇಹ. ಲೋಕದಲ್ಲಿ ಮೂಕನಂತಿರಬೇಕು ಏಕೆ?" – ಎಂದು ಅಭಂಗ ಹೇಳುತ್ತದೆ. ಅಂದರೆ ಜೀವಿಯ ಆಧ್ಯಾತ್ಮಿಕ ಸ್ಥಿತಿಯೂ ಐಹಿಕ ಸ್ಥಿತಿಯೂ ಒಂದೇ ಬಗೆಯ ಮಾತುಗಳಲ್ಲಿ ಪ್ರಕಟಗೊಳ್ಳುವಂತೆ ಏಕಾಕಾರವಾಗಿರುವ ಅಚ್ಚರಿಯನ್ನು ನಾವು ಸಂತರ ಮಾತುಗಳಲ್ಲಿ ಕಾಣುತ್ತೇವೆ. ರಾಮಕೃಷ್ಣ ಪರಮಹಂಸರು ತಮ್ಮಲ್ಲೇ ಗುನುಗುತ್ತಿದ್ದ ಹಾಡೊಂದು – "ಇದು ನಿನ್ನ ಮನೆಯಲ್ಲ. ಇದು ವಿದೇಶ. ಇಲ್ಲಿ ನೀನು ವಿದೇಶಿ. ಇಲ್ಲೇಕೆ ಅಲೆಯುತ್ತಿರುವೆ ಓ ಜೀವ" – ಎನ್ನುತ್ತದೆ. ನಮಗೊಂದು ತಾಯ್ನಾಡು ಇಲ್ಲ ಎನ್ನುವ ದಲಿತ ಸ್ಥಿತಿಯೇ ಈ ಹಾಡಿನಲ್ಲಿ ಆಧ್ಯಾತ್ಮಿಕವಾಗಿ ಪ್ರಕಟಗೊಂಡಿದೆಯೆ? ಇರಲಿ.

ಮೇಲ್ನೋಟಕ್ಕೆ ವೈದಿಕ ಗ್ರಂಥದಂತೆ ಕಾಣುವ 'ಭಾಗವತ' ಒಳಗಡೆ ಚಾತುರ್ವರ್ಣ್ಯ ಧರ್ಮವನ್ನು ಧಿಕ್ಕರಿಸುವ ಅವಧೂತನನ್ನು ಕೀರ್ತಿಸುತ್ತದೆ. ಅಥವಾ ಮಹಾಭಾರತದ ಒಂದು ಮಾತನ್ನು ನೋಡಬಹುದು. "ಒಂದು ಕಾಲ ಇತ್ತು. ಆಗ 'ರಾಜ್ಯ' ಇರಲಿಲ್ಲ. 'ರಾಜ' ಇರಲಿಲ್ಲ. ದಂಡ, ದಂಡಿಸುವವನು; ದಂಡನೆಗೆ ಒಳಗಾಗುವವನು – ಈ ಪರಿಕಲ್ಪನೆಗಳೇ ಇರಲಿಲ್ಲ. ಆಗ 'ಧರ್ಮ' ಮಾತ್ರ ಇತ್ತು. ಜನ, ಪರಸ್ಪರರನ್ನು–ತಮ್ಮೊಬ್ಬರನ್ನಲ್ಲ–ರಕ್ಷಿಸಿಕೊಳ್ಳುತ್ತಿದ್ದರು"– ಎಂಬುದು ಆ ಮಾತು. ಈ ಮಾತು ಮಹತ್ವದ್ದು. ಏಕೆಂದರೆ, ರಾಜನಿರಲಿಲ್ಲ, ಆಳ್ವಿಕೆ ಇರಲಿಲ್ಲವೆಂದಾಗ ಕ್ಷತ್ರಿಯ ವರ್ಣವೇ ಆಗ ಇರಲಿಲ್ಲ ಎಂದಾಯಿತು. ಆಮೇಲೆ; ಕಾಲಾಂತರದಲ್ಲಿ, ಕಾಲದ ಅಗತ್ಯವಾಗಿ ಅದು ಉಂಟಾದದ್ದು ಎಂದಾಯಿತು. ಒಂದು ವರ್ಣವಿರಲಿಲ್ಲ ಎಂದಾಗ ಉಳಿದ ಯಾವ ವರ್ಣಗಳೂ ಇರಲಿಲ್ಲವೆಂದೇ ಅರ್ಥವಾಗುತ್ತದೆ. ಅಂದರೆ ವರ್ಣವ್ಯವಸ್ಥೆ ಎನ್ನುವುದು ದೇವರದೇ ಸೃಷ್ಟಿ, ಅಥವಾ ಸೃಷ್ಟಿಯಲ್ಲಿಯೇ ಈ ವ್ಯವಸ್ಥೆ ಮೂಲಭೂತವಾಗಿದೆ ಎಂಬ ಮಾತು – ಈ ಮಾತನ್ನು ವೇದಗಳೇ ಹೇಳಿರಲಿ – ಬಿದ್ದು ಹೋಯಿತು! ಅಲ್ಲದೆ, ವರ್ಣಗಳಿಲ್ಲದ ಸ್ಥಿತಿಯೇ ಒಂದು ಮೌಲ್ಯವಾಯಿತು! ಒಮ್ಮೆಗೇ ಎಲ್ಲವೂ ನಿರಾಳವಾಯಿತು.

ನಿಜ. ಇವೆಲ್ಲ ಪರೋಕ್ಷ ಸಮೃದ್ಧಿಗಳು. ಪ್ರತ್ಯಕ್ಷ ವಾಸ್ತವ ಮಾತ್ರ ಕಠೋರವಾಗಿದೆ. ನರಕ ಸದೃಶವಾಗಿದೆ. ಈ ಪರೋಕ್ಷ ಸಮೃದ್ಧಿಗಳೆಲ್ಲ ದೊಡ್ಡ ನರಕದ ನಡುವಣ ಪ್ರೇಕ್ಷಣೀಯ ಸ್ಥಳಗಳಂತಿವೆ. ವಾಸ್ತವದ ಗಾಯಗಳು ಮಾಯವಾಗುವುದಿಲ್ಲ. ಇದನ್ನು ನಾನು ಒಪ್ಪುವೆ. ಆದರೆ ನನ್ನ ಆಶ್ಚರ್ಯವೆಂದರೆ, ಈ ಪ್ರತ್ಯಕ್ಷ ನರಕವನ್ನು –ಗಾಂಧಿಯಂತೆ–ಆಯ್ಕೆ ಮಾಡಿಕೊಳ್ಳುವವರಿದ್ದಾರೆಯೆ! ಪರೋಕ್ಷ ಸಮೃದ್ಧಿಯು ಅಷ್ಟೂ ಮಟ್ಟಿಗೆ ಸಮೃದ್ಧವೆ? ಬಸವಣ್ಣನವರ ಆ ಅದ್ಭುತ ವಚನದ ನೆನಪಾಗುತ್ತದೆ.

**"ಚೆನ್ನಯ್ಯನ ಮನೆಯ ದಾಸಿಯ ಮಗನು**
**ಕಕ್ಕಯ್ಯನ ಮನೆಯ ದಾಸಿಯ ಮಗಳು**
**ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು**
**ಇವರಿಬ್ಬರಿಗೆ ಹುಟ್ಟಿದ ಮಗ ನಾನು**
**ಕೂಡಲ ಸಂಗಮ ಸಾಕ್ಷಿಯಾಗಿ."**

ಈ ಸಹಸ್ರಮಾನದ ವಚನವಿದು. ಪರೋಕ್ಷ ಸಮೃದ್ಧಿಯು ಅಥವಾ ಆಧ್ಯಾತ್ಮಿಕ ಅನುಭವವು ಸಮಾಜದ ಯಾವ ವಿವರವಾಗಿ ಕಾಣಿಸಿಕೊಳ್ಳುತ್ತದೆ; ಕಾಣಿಸಿಕೊಳ್ಳಬೇಕು ಎಂಬ ಸೂಚನೆ ಇಲ್ಲಿದೆ. ಬಾಬಾಸಾಹೇಬರು ಈ ವಚನವನ್ನು ಕೇಳಿಸಿಕೊಳ್ಳುತ್ತಿದ್ದರೆ! ಎಂದು ಮನಸ್ಸು ಹಂಬಲಿಸುತ್ತಿರುತ್ತದೆ.

ನನಗನ್ನಿಸುವಂತೆ ಬಾಬಾ ಸಾಹೇಬರದು ಕ್ಷಾತ್ರ ತೇಜಸ್ಸು. ತಮ್ಮ ಸಂಶೋಧನಾತ್ಮಕ ಕೃತಿಯಾದ "Who are the Shudras" ನಲ್ಲಿ, ಶೂದ್ರರು ಕ್ಷತ್ರಿಯರೇ ಆಗಿದ್ದರು ಎಂದು ಸಾಧಿಸುವ ವಿದ್ವತ್ ಪ್ರಯತ್ನವನ್ನವರು ಮಾಡಿದ್ದಾರೆ. ಬೌದ್ಧ ದೀಕ್ಷಾ ಸಮಾರಂಭದಲ್ಲಿ ಅವರು ಮಾಡಿದ ಅತಿ ಮುಖ್ಯ ಭಾಷಣದಲ್ಲಿ,

(೧೮ನೇ ಪಟಕ್ಕೆ

# ಮತಾಂತರದ ಮುಂಚಿನ ತಳಮಳಗಳು...



ಅಂಬೇಡ್ಕರ್ ತಮ್ಮ ಅನುಯಾಯಿಗಳಿಗೆ ಹಿಂದೂ ಮತ ಬಿಟ್ಟು ಬೌದ್ಧಮತ ಸೇರಲು ಆಹ್ವಾನಿಸಿದಾಗ ಅವರ ಕುಟುಂಬಗಳಲ್ಲಿ ದೊಡ್ಡ ತಳಮಳವೇ ನಡೆದು ಹೋಯಿತು. ವಿಶೇಷವಾಗಿ, ಹಿಂದೂ ಸ್ತ್ರೀದೇವತೆಗಳನ್ನು ಪೂಜಿಸಿಕೊಂಡು ಬರುತ್ತಿದ್ದ ಆ ಕುಟುಂಬಗಳ ಮಹಿಳೆಯರ ಬದುಕಿನಲ್ಲಿ ಅಲ್ಲೋಲಕಲ್ಲೋಲವೇ ನಡೆದುಹೋಯಿತು. ಅಂತಹ ಒಂದು ಅನುಭವ ನಿರೂಪಣೆಯನ್ನು ಇಲ್ಲಿ ನೀಡುತ್ತಿದ್ದೇವೆ. ಇದು ಭಾರತದ ರಿಸರ್ವ್ ಬ್ಯಾಂಕಿನ ಉಪ ಗವರ್ನರ್ ಜನರಲ್‌ರೂ ಆಗಿದ್ದ ಖ್ಯಾತ ಅರ್ಥಶಾಸ್ತ್ರಜ್ಞ **ಡಾ. ನರೇಂದ್ರ ಜಾಧವ್** ಅವರ Outcaste ಎಂಬ ಇಂಗ್ಲಿಷ್ ಪುಸ್ತಕದ ಕನ್ನಡ ಅನುವಾದ **'ಬಹಿಷ್ಕೃತ'**ದ(**ಅನು: ಸುಮಾ ದ್ವಾರಕಾನಾಥ್, ಪ್ರ: ನವ ಕರ್ನಾಟಕ, ಬೆಂಗಳೂರು**) ಒಂದು ಸಣ್ಣ ಭಾಗ. ಜಾಧವ್ ಅವರ ತಂದೆ ದಾಮು ಅಂಬೇಡ್ಕರ್‌ರ ಅನುಯಾಯಿ. ಈ ಪುಸ್ತಕದಲ್ಲಿ ದಾಮು, ಆತನ ಹೆಂಡತಿ ಸೋನು, ನರೇಂದ್ರ ಜಾಧವ್ ಮತ್ತು ಅವರ ಮಗಳು ಅಪೂರ್ವ ಹೀಗೆ ಮೂರು ತಲೆಮಾರುಗಳು ಈ ಪುಸ್ತಕದಲ್ಲಿ ತಮ್ಮ ಅನುಭವಗಳನ್ನು ನಿರೂಪಣೆ ಮಾಡಿದ್ದಾರೆ. ಇಲ್ಲಿ ಮತಾಂತರದ ಸಂದರ್ಭದ ಸೋನುವಿನ ಅನುಭವವನ್ನು ಆಯ್ದು ನೀಡಿದ್ದೇವೆ.–ಸಂ

**ನ**ನ್ನ ಗಂಡ ದಿನಪತ್ರಿಕೆಯಲ್ಲಿ ಕಣ್ಣಾಡಿಸುತ್ತಿರುವಾಗ ಸಾಮಾನ್ಯವಾಗಿ ಸಂಪಾದಕೀಯವನ್ನು ಆದರದಿಂದ ಓದುತ್ತಿದ್ದವನು ಅಂದು ಬಾಬಾಸಾಹೇಬರು ದಲಿತರಿಗೆ ಹಿಂದು ಧರ್ಮವನ್ನು ತ್ಯಜಿಸಿ ಎಂದು ನೀಡಿದ ಕರೆಯನ್ನು ಖಂಡಿಸಿದ್ದನ್ನು ನೋಡಿ ಸಿಡಿಮಿಡಿಗೊಂಡ. ನನ್ನ ಗಂಡನ ಪ್ರಕಾರ ಬಾಬಾಸಾಹೇಬರು ಹೇಳಿದ್ದೆಲ್ಲವನ್ನೂ ಪ್ರಶ್ನಿಸದೆ ಅನುಸರಿಸಬೇಕು. ನನ್ನವನಿಗೆ ಸಿಟ್ಟು ಬಂತು. ಅವನ ದನಿ ಏರಿ ಕಣ್ಣುಕೆಂಪಗಾಯಿತು.

"ಈ ಮಂದಿಗೆ ಏನು ಬೇಕು? ಅವರಿಗೆ, ನಾವು ಹಿಂದೂಗಳಾಗಿದ್ದು ದೇವಾಲಯಕ್ಕೆ ಪ್ರವೇಶ ನೀಡದಿರೋ ಹಿಂದುತ್ವವನ್ನ, ನಾವು ನಮ್ರವಾಗಿ ಅನುಸರಿಸಬೇಕು.! ಯಾವ ಧರ್ಮ ಅಸ್ಪೃಶ್ಯತೆ ಹಾಗೂ ತಾರತಮ್ಯವನ್ನು ಬೋಧಿಸುವುದೋ ಅದನ್ನು ನಾವ್ಯಾಕೆ ಬೆಂಬಲಿಸಬೇಕು? ಬ್ರಾಹ್ಮಣರಿಗೆ ನಮ್ಮ ಹಣೆಬರಹ ನಿರ್ಧರಿಸೋಕೆ ಯಾರು ಅಧಿಕಾರ ಕೊಟ್ರು? ನಾವೇ ನಮ್ಮ ಭವಿಷ್ಯದ ಒಡೆಯರು, ಸಮಾಜದಲ್ಲಿ ನಮ್ಮ ಹಕ್ಕಿನ ಸ್ಥಾನ ಪಡೆಯಲೇಬೇಕು. ನಾವು ಹಿಂದು ಧರ್ಮವನ್ನು ತ್ಯಜಿಸಲೇಬೇಕು. ಬಾಬಾಸಾಹೇಬರಿಗೆ ಜಯವಾಗಲಿ! ನಮ್ಮ ದಾರ್ಶನಿಕ, ನಮ್ಮ ರಕ್ಷಕನಿಗೆ ಜಯವಾಗಲಿ!" ಅವನು ಇದೆಲ್ಲವನ್ನೂ ಒಂದೇ ಉಸಿರಿಗೆ ಹೇಳಿದ.

ಅವನ ಸುತ್ತಲೂ ಸೇರಿದ್ದ ಮಂದಿಯಲ್ಲಿ ಗುಸುಗುಸು ಪ್ರಾರಂಭವಾಯಿತು. ನಮ್ಮನ್ನು ಅವರು ನೋಡುತ್ತಿದ್ದ ರೀತಿ ನನಗೆ ಗೊಂದಲ ಹುಟ್ಟಿಸಿತ್ತು. ನಾವು ಕೀಳ್ಜಾತಿಯೋರಿರಬಹುದು, ಅದ್ರೂ ನಾವು ಹಿಂದೂಗಳೇ..ನಮ್ಮನ್ನು ಹಿಂದೂ ದೇವ್ರನ್ನ ಪೂಜೆ ಮಾಡೋಕೆ ದೇವಾಲಯಗಳಲ್ಲಿ ಬಿಡ್ತಿರಲಿಲ್ಲ. ನಾವೆಲ್ಲೇ ಹೋದ್ರೂ ಈ ಭೇದಭಾವ ಅನುಭವಿಸ್ತಿದ್ವಿ, ದೇವ್ರ ಮನಸ್ಸಿನಲ್ಲಿ ಹಾಗೇ ಇದೆಯೇನೋ. ನಮ್ಮನ್ನ ಅವರು ಕೀಳಾಗಿ ನೋಡ್ಬೇಕಾದ್ರೆ ನಾವು ಹೋದ ಜಲ್ಮದಲ್ಲಿ ಕೆಟ್ಟದು ಮಾಡಿರಬೇಕು.

ನನಗೆ ನಾನೇ ಹೇಳ್ಕೊಂಡಿದ್ದೆ, ಇದು ನಮ್ಮ ಪ್ರಾರಬ್ಧ. ಆದ್ರಿಂದ ನಾವು ಒಪ್ಕೊಳ್ಳೇಬೇಕು ಮತ್ತೆ ಅದರ ಜೊತೆ ಬದುಕಲೇಬೇಕು–ನಮ್ಮ ದೇವ್ರುಗಳಾದ ಮಾರಿ ಆಯಿ, ಖಂಡೋಬಾ ಮತ್ತೆ ಪಂಢರಪುರದ ವಿಠೋಬಾಗಳಲ್ಲೇ ಶಾಂತಿ ಬೇಡ್ಕೊಂಡು. ಈ ವಿಪತ್ತಿನಿಂದ ಪಾರು ಮಾಡೋದು ಇವರೇ.. ನನಗೊಂದು ಕೂಸು ಬೇಕಾಗಿದ್ದಾಗ ನಾನು ಭಕ್ತಿಯಿಂದ ಕೇಳಿಕೊಂಡಿದ್ದನ್ನು ಅವರು ನೀಡಿದ್ದು ನನ್ನ ನೆನಪಿಗೆ ಬಂತು. ನನ್ನ ಚಿಕ್ಕಂದಿನಿಂದಲೂ ದೇವ್ರಲ್ಲಿ ನನ್ನ ಆಯಿಯ ವಿಶ್ವಾಸ ಕಂಡಿದ್ದೆ. ನನ್ನ ಲಗ್ನಾ ಆದ್ಮೇಲೆ ನಮ್ಮತ್ತೆ ನಮ್ಮನೇ ಹಿತ್ತಾಳೆ ದೇವ್ರಗಳನ್ನೆಲ್ಲಾ ನನ್ನ ಕೈಗೇ ಒಪ್ಪಿಸಿದ್ಲು. ಅವಳು ಹೇಳಿದ್ದು ಇನ್ನೂ ನನಗೆ ನೆನಪಿದೆ, 'ಸೋನೆ, ನೀನು ಈ ಮೂರ್ತಿಗಳನ್ನು ನೋಡಿಕೋ, ಅವೂ ನಿನ್ನನ್ನು ಯಾವತ್ತಿಗೂ ನೋಡಿಕೊಳ್ಳುತ್ತವೆ.' ಅದರಂತೇ ನಾನು ಯಾವತ್ತೂ ಪೂಜಿಸುವುದನ್ನು ಮರೆತಿರಲಿಲ್ಲ. ನಂಗೇನು ಸಮಸ್ಯೆ ಕಾಡಿದರೂ, ನನ್ನವನಿಗೆ ಕೆಲಸವಿಲ್ಲದಿದ್ದಾಗ, ಅವನು ಆಸ್ಪತ್ರೆಯಲ್ಲಿದ್ದಾಗ ಅವನಿಗೆ ಗುಣವಾಗಲಿ ಎಂದು ನಾನು ಸೆರಗೊಡ್ಡಿ ಬೇಡಿಕೊಂಡಿದ್ದೆ. ನನ್ನ ಮಕ್ಕಳ ಕಾಯಿಲೆಯಲ್ಲಿ ನಾನು ಕಣ್ಣೀರಿನಿಂದ ಅವನ್ನು ತೊಯ್ಸಿದ್ದೆ.

ನನ್ನ ಪ್ರಾರ್ಥನೆಗಳು ಯಾವತ್ತೂ ಕೈಗೂಡಿದ್ದವು. ನನ್ನ ದೇವರುಗಳು ನನ್ನನ್ನೆಂದೂ ಕಡೆಗಣಿಸಿರಲಿಲ್ಲ. ನನ್ನ ಗಂಡನಿಗೆ ಈಗ ಇದೇನು ಹೊಸ ಭ್ರಾಂತಿ ಆವರಿಸಿದೆ? ನಮ್ಮ ಧರ್ಮ ಬಿಟ್ಟು, ನಮ್ಮ ದೇವ್ರನ್ನ ಬಿಡೋದು! ಬಾಬಾಸಾಹೇಬರನ್ನು ರಕ್ಷಕರೆಂದು ಆರಾಧಿಸೋದು ಸರಿ, ಆದ್ರೆ ಅವರು ಹೇಳಿದ್ದನ್ನೆಲ್ಲಾ ಕುರುಡರಂತೆ ಒಪ್ಕೊಳ್ಳೋದು ಹೇಗೆ? ನನ್ನವನು ನನಗೆ ವಿಚಾರ ಮಾಡಿ ಪ್ರಶ್ನಿಸಲು ಕಲಿಸಿದ್ದನೋ ಇಲ್ವೋ? ಈಗ ಇಲ್ಲಿ ಅವನದೇ ದಾರಿ. ನಾನು ಬೇಸರದಿಂದ ಬೇರೆ ಕಡೆ ನೋಡಿದೆ.



"ಏ, ಸೋನೆ, ನಿಂಗೇನಾಗಿದೆ? ಯಾಕೆ, ಯಾರಾದ್ರೂ ತೀರಿಹೋದ್ದೇನು?"

"ಹೌದು, ನೀನು ನನ್ನ ವಿಶ್ವಾಸವನ್ನೇ ಕೊಲ್ತಿದ್ದೀಯಾ" ನನಗೇ ನನ್ನ ದನಿಯ ನಂಜು ಆಶ್ಚರ್ಯವಾಯಿತು.

"ಇಲ್ಲ, ಮಾನವರಾಗಿ ನಮ್ಮೊಳಗಿನ ವಿಶ್ವಾಸದ ಜ್ಯೋತಿಯನ್ನ ನಾವು ಮತ್ತೆ ಹೊತ್ತಿಸ್ತಾ ಇದ್ದೇವೆ. ನಾವು ಬೇಡವಾಗಿರುವ ಕಡೆ ಧರ್ಮಾನ ಬಿಡುತ್ತಿದ್ದೇವೆ."

"ಆದ್ರೆ ನಾವು ಹುಟ್ಟಾ ಹಿಂದೂಗಳು, ನಮ್ಮ ಪೂರ್ವಜರೆಲ್ಲರೂ ನಿರ್ವಿವಾದವಾಗಿ ಹಿಂದೂಗಳು. ಈಗ ನೀನು ಬಿಟ್ಬುಬಿಡ್ತೀನಿ ಅಂತ ಹೇಳಿದ್ರೆ, ನಾವು ಹಿಂದೂಗಳಾಗೋದು ನಿಲ್ಲತ್ತಾ? ನಿಂಗೇನು ಬೇಕೋ ನೀನು ಹೇಳಬಹುದು. ಆದರೆ ನಮ್ಮ ಪೂರ್ವಜರ ಧರ್ಮ ತೊಡೆದು ಹಾಕೋಕೆ ನಿಂಗೆ ಸಾಧ್ಯವಿಲ್ಲ."

ನನ್ನವನು ಜೋರಾಗಿ ನಕ್ಕುಬಿಟ್ಟ. "ವಾ, ಸೋನೆ! ನೀನು ಎಷ್ಟು ಚೆನ್ನಾಗಿ ಮಾತಾಡ್ತೀಯಾ?"

ನನ್ನ ಕಣ್ಣ ತುಂಬಿ ಬಂತು. "ನನ್ನ ವಿಚಾರಗಳನ್ನ ಗೇಲಿ ಮಾಡು, ನಾನೇನು ಲಕ್ಷ್ಯ ಕೊಡೋಲ್ಲ. ನಾನು ಯೋಚಿಸೋದು, ಭಾವಿಸೋದು ಇದೇ ತರಹ. ನೀನು ಯಾವಾಗ್ಲೂ, ನಾನು ಯೋಚಿಸೋಕೆ ಆಗೋಲ್ಲ ಅಂತಿದ್ದೆ, ಆದ್ರೆ ನೀನು ತಪ್ಪು ತಿಳ್ಕೊಂಡಿದ್ದೀ. ಎಲ್ರಿಗೂ ವಿಚಾರ ಮಾಡೋ ಶಕ್ತಿ ಇರ್ತದೆ, ಉಣ್ಣೋಕೆ, ಕುಡಿಯೋಕೆ, ಬದುಕೋಕೆ, ಸಂತೋಷ, ದುಃಖಪಡೋ ಶಕ್ತಿ ಇದ್ದಂಗೆ. ಮೊದಮೊದಲು ನಾನಿನ್ನೂ ಸಣ್ಣೋಳಾಗಿದ್ರಿಂದ ನಾನೇನು ವಿಚಾರ ಮಾಡ್ತಿದೀನಿ ಅನ್ನೋದು ಹೇಳೋಕೆ ಹೆದರ್ತಿದ್ದೆ".

"ನಾನ್ಹೇಳಿದ್ದೆಲ್ಲಾ ನಿನ್ನ ತಲೆ ಹೊಕ್ಕಿದೆ. ನೋಡು ನೀನು ಹೇಗೆ ನಂಗೇ ತಿರಗಿಸ್ತೀಯಾ?"

* * *

ಆ ರಾತ್ರಿ ನನಗೆ ನಿದ್ದೆ ಮಾಡೋಕೆ ಆಗಲೇ ಇಲ್ಲ. ನನ್ನ ಮನಸ್ಸಿಗೆ ತೊಂದರೆ ಆಗಿತ್ತು. ನನ್ನ ಗಂಡನ ನಂಬಿಕೆಗಳನ್ನು ಒತ್ತಾಯವಾಗಿ ಹೇರಿಸಿಕೊಳ್ಳಲು ನಾನು ಸಿದ್ಧಳಿರಲಿಲ್ಲ. ನನಗೆ ಬಾಬಾಸಾಹೇಬರ ಮೇಲೆ ವಿಶ್ವಾಸವಿದ್ದರೂ, ಅವನ ರೀತಿ ಕುರುಡು ವಿಶ್ವಾಸವಿರಲಿಲ್ಲ. ಹೌದು ಬಾಬಾ ಸಾಹೇಬರು ಹೇಳಿದಂತೆ ನಾವು ನಮ್ಮ ಹಕ್ಕಿಗಾಗಿ, ಗೌರವಕ್ಕಾಗಿ ಹೋರಾಡಬೇಕು. ಆದರೆ ದೇವರು ಧರ್ಮದ ಗೋಜಿಗೆ ಹೋಗುವುದೇ? ಅದು ತೀರಾ ಅತಿಯಾಯಿತು. ನಾನು ಈ ಧರ್ಮದ್ರೋಹ ಮಾಡಲು ಬಿಡುವುದಿಲ್ಲ.

ನಾನೇನು ಮಾಡಬಹುದು? ನನ್ನೊಳಗೇ ಹೆದರಿದೆ. ಎಂದಿನಂತೆ ನನ್ನ ಗಂಡನನ್ನ ಅನುಸರಿಸೋದು ಬಿಟ್ಟು ನನಗೆ ಬೇರೇನೂ ಆಯ್ಕೆಯಿರಲಿಲ್ಲ. ನಾನು ಮೌನವಾಗೇ ಮಾರಿ ಆಯಿಗೆ ಪ್ರಾರ್ಥಿಸಿದೆ, ನನಗೆ ಸರಿಯಾದ ಹಾದಿಯಲ್ಲಿ ನಡೆಯುವ ಶಕ್ತಿ ಕೊಡು ಎಂದು. ನನ್ನವನು ನನ್ನನ್ನು ಮುಂಬೈಗೆ ಕರೆದುಕೊಂಡು ಹೋಗಲು ಬಂದಾಗ, ನಮ್ಮ ಆಯಿ ಹೇಳಿದ್ದ ಮಾತುಗಳನ್ನು ನೆನಪಿಸಿಕೊಂಡೆ. "ಸೋನೆ, ನಿನ್ನ ಗಂಡನೇ ನಿನಗೆ ದೇವರು. ನಿರ್ವಿವಾದವಾಗಿ ಅವನಿಗೆ ವಿಧೇಯಳಾಗಿರು, ಅವನೇನೇ ಮಾಡಲಿ, ಅವನನ್ನು ಪೂರ್ತಿಯಾಗಿ ಸ್ವೀಕರಿಸು.

ನಿನಗೆ ಅವನೇ ಸರ್ವಸ್ವ, ನಿನ್ನ ಸಾವಿನೊಂದಿಗೇ ಅವನಿಂದ ಬಿಡುಗಡೆ." ಈಗ ನಾನೇನು ಮಾಡುವುದು?

ಹಿಂದು ಮತ ತ್ಯಜಿಸುವುದೆಂದರೆ ಮಾನಸಿಕವಾಗಿ ಸಾಯುವುದೆಂದೇ. ನನ್ನವನು ಅಷ್ಟು ಅತಿರೇಕಕ್ಕೆ ಹೋಗುವ ಮುಂಚೆ ಅವನನ್ನು ತಡೆಯಲು ನಾನು ಏನಾದ್ರೂ ಮಾಡಲೇಬೇಕೆನಿಸಿತು. ಆದ್ರೇನು ನಮ್ಮ ನೆರೆಯಲ್ಲಿ ಮುಸ್ಲಿಮರು, ಕ್ರಿಶ್ಚಿಯನ್ನರು ಇದ್ದರು, ನಾನು ಪಾರ್ಸಿ, ಜ್ಯೂಗಳನ್ನೂ ನೋಡಿದ್ದೆ. ಅವರೂ ಧರ್ಮಭೀರುಗಳೂ, ಒಳ್ಳೆಯವರೂ ಆಗಿದ್ದರು. ಅವರೆಲ್ಲಾ ಬೇರೆ ಬೇರೆ ಗುಡಿಗಳಿಗೆ ಹೋಗಿ ಬೇರೆ ಬೇರೆ ದೇವರನ್ನು ಪೂಜಿಸುತ್ತಿದ್ದರು. ಆದರೆ ಅವರು ಚಿಕ್ಕಂದಿನಿಂದ ಹಾಗೇ ಬೆಳೆದಿದ್ದರು. ಹಾಗೇ ಅವರ ತಂದೆ ತಾಯಿಗಳೂ ಮತ್ತು ತಾತಂದಿರೂ. ನಾವು ಪರಸ್ಪರ ಇಷ್ಟಪಡ್ತಿದ್ವಿ, ಗೌರವಿಸತಿದ್ವಿ; ಹಾಗಂತ ನಮ್ಮ ಧರ್ಮ ಬಿಟ್ಟು ಅವ್ರನ್ನ ಅನುಸರಿಸೋಕೆ ಆಗುತ್ತಾ!

ನನ್ನ ಸೊಂತ ಮಕ್ಕಳು, ಬೇರೆ ಬೇರೆ ಅಡಿಗೆ ಇಷ್ಟಪಡ್ತಿದ್ರು, ಬೇರೆ ಬೇರೆ ಆಟ ಆಡ್ತಿದ್ರು, ಬೇರೆ ಬೇರೆ ಗೆಳೆಯರಿದ್ರು. ಅವ್ರೆಲ್ಲಾ ಬೇರೆ ರೀತಿಯೇ ಇದ್ರು. ನಮಗೆ ಬೇರೆ ಧರ್ಮ ಕೊಡಬೇಕೂಂತಿದ್ರೆ ದೇವ್ರು ನಮ್ಮನ್ನ ಬೇರೆ ಧರ್ಮದಲ್ಲೇ ಹುಟ್ಟಿಸ್ತಿದ್ದ. ಬೇರೆ ಧರ್ಮಗಳು ಒಳ್ಳೇದಲ್ಲ ಅಂತೇನೂ ಅಲ್ಲ. ನಾನು ಎಲ್ಲಾ ಧರ್ಮಾನೂ ಗೌರವಿಸುತ್ತೇನೆ. ಒಂದಕ್ಕಿಂತ ಇನ್ನೊಂದು ಧರ್ಮ ಶ್ರೇಷ್ಠವೇನಲ್ಲ. ನನಗೆ ಹತ್ತು ವರ್ಷ ಮಕ್ಕಳಾಗದಿದ್ದಾಗ ಚರ್ಚಿನಲ್ಲಿ ಮೇರಿ ಆಯಿಗೆ, ಜೀಸಸ್‌ಗೆ ಬೇಡಿಕೊಂಡಿರಲಿಲ್ಲವೇ? ನಾನು ಶಿಲುಬೆಗೇರಿದ ಜೀಸಸ್ ಕಡೆ ನೋಡಿದಾಗ, ಅವನೇ ರಕ್ತ ಸುರಿಸಿಕೊಂಡು ನೋವು ಅನುಭವಿಸುತ್ತಿರುವಾಗ ನನಗೆ ಸಹಾಯ ಮಾಡು ಎಂದು ಹೇಗೆ ಕೇಳಲಿ ಎನಿಸಿತ್ತು. ದೇವರ ಮೂರ್ತಿಯಿಲ್ಲದ, ಬರೀ ಆಯತಾಕಾರದ ಪೆಟ್ಟಿಗೆಗೆ ಹಸಿರು ಬಟ್ಟೆ ಹೊದ್ದಿಸಿ ಹೂವಿನ ಹಾರಗಳಿಂದ ಅಲಂಕಾರ ಮಾಡಿದ ದರ್ಗಾಗೂ ನಾನು ಹೋಗಿ ಬೇಡಿದ್ದೆ.

ಹಾಗೆಂದು ನಾನೆಂದೂ ಹಿಂದೂ ದೇವರುಗಳ ಸಂಕಲ್ಪವನ್ನಾಗಲೀ, ಹಿಂದೂ ಧರ್ಮವನ್ನಾಗಲೀ ಪ್ರಶ್ನಿಸಲು ಹೋಗಿದ್ದಿಲ್ಲ. ನಾನು ಖಂಡಿತ ಅದರ ವಿರುದ್ಧ ಏನೂ ಮಾಡುವುದಿಲ್ಲ. ಮಾರಿ ಆಯಿ ದೇವಿ ನಮಗೆ ತಾಯಿಯಿದ್ದ ಹಾಗೆ. ಅವಳ ಚಿತ್ರ ಕಣ್ಣ ಮುಂದೆ ಬಂದ ಹಾಗೆ ನನಗೆ ಅಳು ಉಕ್ಕಿ ಬಂತು. ನನ್ನ ಅಮ್ಮನನ್ನೇ ತ್ಯಜಿಸು ಅಂತ ಯಾರು ಹೇಳೋಕೆ ಸಾಧ್ಯ?

ನಾವು ಪಂಢರಪುರದ ವಿಠೋಬಾನ್ನ ಶ್ರೀಕೃಷ್ಣನ ಅವತಾರ ಅಂತ ಪೂಜಿಸುತ್ತೇವೆ. ಅವನಿಗೆ ನಮ್ಮ ಜನಗಳ ತರಾನೇ ಕಪ್ಪುಬಣ್ಣದ ಮೈ- ಆದ್ರೆ ಕರುಣಿ, ದಯಾಳು ಹಾಗೂ ಆಶ್ವಾಸನೆ ನೀಡುವಂತಹ ಒಳ್ಳೆ ನಗು ಮುಖದವನು. ನಾನು ನನಗಿಷ್ಟವಾದ ಅಭಂಗ ಗುನುಗುನಿಸಲು ಆರಂಭಿಸಿದೆ: 'ನನ್ನ ಬಳಿ ಏನೂ ಇಲ್ಲದಿದ್ದಾಗ ಕೆಲವು ಅನ್ನದ ಅಗುಳನ್ನಾದ್ರೂ ಅರ್ಪಿಸುತ್ತೇನೆ, ಹೂಗಳಿಲ್ಲದಿದ್ರೂ ಹೂವಿನ ಒಂದು ಎಸಳನ್ನಾದ್ರೂ ಅರ್ಪಿಸುತ್ತೇನೆ. ನನ್ನ ಬಳಿ ಏನೂ ಇಲ್ಲದಾಗ ನಾನು ನಿನಗೆ ತಲೆಬಾಗಿ ನನ್ನ ಹೃದಯಾಂತರಾಳದಿಂದ ನಿನ್ನ ನಾಮಸ್ಮರಣೆ ಮಾಡಿ ಸಂತೋಷವಾಗಿರುತ್ತೇನೆ.' ವಿಠೋಬಾ ಪ್ರೀತಿ, ಭಕ್ತಿ ಬಿಟ್ಟು ಇನ್ನೇನೂ ಕೇಳೋಲ್ಲ. ಈಗ ನಮ್ಮ ಪ್ರೀತಿಯ ಭಕ್ತಿಯನ್ನೆಲ್ಲಾ ಬಿಟ್ಟು ಬುದ್ಧನ್ನ ಪೂಜಿಸೋಕೆ ಸುರು ಮಾಡ್ಬೇಕು.

ನಮ್ಮ ಹಿಂದೂ ದೇವರುಗಳ ಜೊತೆಗೆ ಬುದ್ಧನನ್ನೂ ಪೂಜಿಸೋಣ ಎಂದು ನನ್ನ ಗಂಡನಿಗೆ ಹೇಳಿ ನೋಡಬಹುದೆಂಬ ವಿಚಾರವೂ ತಲೆಯಲ್ಲಿ ಹೊಳೆಯಿತು. ನಮ್ಮ ತಾತಮುತ್ತಾತಂದಿರ ಕಾಲದಿಂದ, ನನ್ನ ಚಿಕ್ಕಂದಿನಿಂದ ನನ್ನ ಜೊತೆಗೇ ಇದ್ದ ಮಾರಿ ಆಯಿ, ವಿಠೋಬಾ ಹಾಗೂ ಖಂಡೋಬಾರನ್ನು ಮರೆಯಲಾರೆ. ನಾವು ಹೇಗೆ ಅವರನ್ನು ತ್ಯಜಿಸುವುದು? ಅವರೂ ನಮ್ಮಿಂದ ಹಾಗೆ ನಿರೀಕ್ಷಿಸಲು ಹೇಗೆ ಸಾಧ್ಯ? ನಾನು ನನ್ನವನಿಗೆ ಇಷ್ಟು ವರ್ಷ ವಿಧೇಯಳಾಗೇ ಇದ್ದೇನೆ. ಅವನ ಬೈಗುಳವನ್ನು ಸಹಿಸುತ್ತಾ ಎಲ್ಲಾ ವಿಷಯದಲ್ಲೂ ಕೋಪವನ್ನು ತಡೆಯುತ್ತಾ ಬಂದಿದ್ದೇನೆ. ಆದರೆ ಅವನು ಹೇಗೆ ನಮ್ಮನ್ನು ಧರ್ಮ ಬದಲಿಸಲು ನಿರೀಕ್ಷೆ ಮಾಡುತ್ತಾನೆ? ಈ ಸಲ ನಾನು ಕುರುಡಾಗಿ ಅವನನ್ನು ಅನುಸರಿಸೋಲ್ಲ ಎಂದು ನಿಶ್ಚಯಿಸಿಕೊಂಡೆ. ನಾನು ವಿಚಾರ ಮಾಡಿ ನೋಡಿದೆ. ನಮ್ಮ ಧರ್ಮವನ್ನು ತ್ಯಜಿಸುವುದು ನನಗೆ ಸೂಕ್ತವಾಗಿ ಕಾಣಲಿಲ್ಲೆಂದು ಧೈರ್ಯವಾಗಿ ಹೇಳಿಬಿಡುವುದೆಂದು ನಿರ್ಧರಿಸಿದೆ. ಅವನಿಗೆ ನನ್ನ ವಿಶ್ವಾಸವನ್ನು ಬದಲಿಸುವುದಿಲ್ಲವೆಂದು ಮುಂಜಾನೆ ಹೇಳುವುದೆಂದುಕೊಂಡೆ. ನಾನು ಏಕೋದೃಢ ನಿರ್ಧಾರ ಮಾಡಿ ನನ್ನ ಆತ್ಮ ಹೇಳಿದ ಹಾಗೆ ನಾನು ಮಾಡುವೆನು ಎಂದುಕೊಂಡೆ. ಹಾಗೇ ನಾನು ನಿದ್ದೆಗೆ ಜಾರಿದೆ.

ಮಾರನೇ ದಿನ ಎದ್ದಾಗ ದಿನನಿತ್ಯದ ಕೆಲಸಗಳಾದ ಅಡಿಗೆ ಮಾಡೋದು, ಮಕ್ಕಳಿಗೆ ಉಣ್ಣಕ್ಕಿಕ್ಕೋದು, ಸಾಲೇಗೆ ಕಳಿಸೋದು ಇವುಗಳಲ್ಲಿ ಮುಳುಗಿ ನನಗೆ ಆ ವಿಷಯ ಮರೆತೇ ಹೋಗಿತ್ತು. ಆದರೆ ಮಧ್ಯಾಹ್ನ, ನೀರು ತರಕ್ಕೆ ಹೋದಾಗ ಎಲ್ಲಾ ಹೆಂಗಸರೂ ಅದೇ ವಿಷಯಾನ ಜೋರು ಜೋರಾಗಿ ಮಾತಾಡ್ತಿದ್ರು. ಅವರ್‍ಯಾರೂ ಹಿಂದು ಧರ್ಮ ಬಿಡಕ್ಕೆ ತಯಾರಿರದಿದ್ರೂ, ಅವರ ಗಂಡಂದಿರಿಗೆ ಹೆದ್ರಿ ದನಿ ಎತ್ತಲಾರದವರಾಗಿದ್ರು. ನಾನು ಸುಮ್ಮನೇ ಅವರ ಮಾತು ಕೇಳ್ತಿದ್ರೂ ಕೊನೆಗೆ ಅವ್ರೆಲ್ಲಾ ಗಂಡಂದಿರನ್ನೇ ಅನುಸರಿಸೋದು ಅಂತ ನಿಶ್ಚಯಿಸಿದಾಗ ನನಗೆ ರೇಗಿತು. ಆದ್ರೆ ನನ್ನೆದೆಯೊಳಗೇ, ನಾನು ಸೋಲ್ತಿರೋ ಅನುಭವ ಆಯ್ತು.... ನಾನೂ ಹಾಗೇ ನನ್ನ ಗಂಡನ್ನ ಅನುಸರಿಸಬೇಕಲ್ಲಾ ಅನ್ನಿಸಿ ತೀವ್ರ ವೇದನೆಯಾಯಿತು.

ಕೊನೆಗೆ ಅದೇ ಆಗಿದ್ದು, ಆದ್ರೆ ನನಗೆ ತುಂಬಾ ಕಷ್ಟ ಆಯ್ತು. ತಲೆನೋವಿಂದ, ಅಸ್ವಸ್ಥತೆಯಿಂದ ನಾನು ಒದ್ದಾಡ್ತಿದ್ದೆ. ನಾನು ದಿನನಿತ್ಯದ ಕೆಲಸಗಳನ್ನ ಯಾಂತ್ರಿಕವಾಗಿ ಮಾಡಿಕೊಂಡು ಹೋಗ್ತಿದ್ದೆ. ನನಗೆ ಹಸಿವೂ ಆಗ್ತಿರಲಿಲ್ಲ. ಯಾರ ಕೈಲೂ ಮಾತಾಡಬೇಕೂ ಎನಿಸುತ್ತಿರಲಿಲ್ಲ. ನನಗೆ ಈ ವಿರೋಧಾಭಾಸ ಬೇಡ ಅಂತ ಜೋರಾಗಿ ದೊಡ್ಡ ದನೀಲಿ ಅಳಬೇಕೂ ಅನ್ನಿಸುತ್ತಿತ್ತು. ನನಗೆ ಮಾರಿ ಆಯಿ ಕಾಲ ಮೇಲೆ ಬಿದ್ದು ಏನಾದ್ರೂ ದಾರಿ ತೋರಿಸಮ್ಮಾ ಅಂತ ಕೇಳಬೇಕಾಗಿತ್ತು.

ನನ್ನ ಮೌನವನ್ನು ಗಮನಿಸದೇ ಹೋಗಲಿಲ್ಲ. ಲಗ್ನಾ ಆದ್ಮೇಲೆ ಮೊದಲ ಸಲ ನಮ್ಮ ಮಕ್ಕಳೆದುರಿಗೆ ನನ್ನ ಗಂಡ ನನ್ನ ಮೇಲೆ ಜೋರು ಮಾಡಿದ.

"ಸೋನೆ, ನಾನಿನ್ನೂ ಬದುಕಿದ್ದೀನಿ. ನಿನ್ನ ಗಂಡನ ಸೂತಕವಿದ್ದೋಳಂತೆ ಓಡಾಡ್ಬೇಡ, ನಿನ್ನ ಕಣ್ಣೀರೇನೂ ನನ್ನ ಮೇಲೆ ಪರಿಣಾಮ ಬೀರೋಲ್ಲ. ನನ್ನ ನಿರ್ಧಾರವೇ ಕೊನೆಯದು."

ಆಮೇಲೆ ಸಂಜೆ ಅವನು ನನ್ನನ್ನು ತನ್ನ ಹತ್ರ ಎಳ್ಕೊಂಡು ನಿಧಾನವಾಗಿ ವಿವರಿಸಿದ. ನಾವು ಹಿಂದೂ ದೇವರನ್ನ, ಬುದ್ಧನ್ನ ಇಬ್ರನ್ನೂ ಒಟ್ಟಿಗೆ ಪೂಜೆ ಮಾಡೋಕೆ ಆಗೋಲ್ಲ. ಅದರ ಬಗ್ಗೆ ದೊಡ್ಡ ಚರ್ಚೆ ಆಗ್ತಿದೆ. ಹಿಂದೂಗಳು ಬುದ್ಧನನ್ನು ವಿಷ್ಣುವಿನ ಅವತಾರ ಅಂತ ಹೇಳಿ ಪೂಜಿಸೋಕೆ ಸುರು ಮಾಡಿದ್ದಾರೆ. ಬಾಬಾಸಾಹೇಬರು ಹೇಳಿದರು, ಮತ್ತೊಂದು ಸಲ ಹಿಂದೂ ಪುರೋಹಿತಶಾಹಿ ವರ್ಗ ಬುದ್ಧನ ಪೂಜೇನೂ ಯಜಮಾನಿಕೆ ವಹಿಸಿ ಏಕಸ್ವಾಮ್ಯ ಮಾಡಿಕೊಳ್ತಿದ್ದಾರೆ ಅಂತ. ಬಾಬಾಸಾಹೇಬರಿಗೆ ಪುನರ್ಜನ್ಮ ಅಥವಾ ಅವತಾರದಲ್ಲಿ ನಂಬಿಕೆ ಇರಲಿಲ್ಲ. ಅವರು ಹೇಳಿದರು, ಹಿಂದೂಗಳು ಬುದ್ಧನನ್ನೂ ಅವರ ದೇವರ ಜೊತೆ ಯಾಕೆ ಸೇರಿಸ್ಕೊಂಡ್ತಿದ್ದಾರೆ ಅಂದ್ರೆ ಹಿಂದೂ ಮತದಲ್ಲಿ ಬೌದ್ಧಮತವನ್ನೂ ಲೀನ ಮಾಡ್ಕೊಳ್ಳೋಕೆ. ಕಾಲಾನಂತರ ಅವರು ಬೌದ್ಧಮತವನ್ನು ನಾಶ ಮಾಡಿ ಹಾಕಿ ಹಿಂದೂ ಮತವನ್ನಷ್ಟೇ ಧರ್ಮವಾಗಿ ಸ್ಥಾಪಿಸುತ್ತಾರೆ.

ಹಿಂದೂಗಳು ಬುದ್ಧನನ್ನ ಪೂಜಿಸಬೇಕು ಅಂತಾರೋ ಬಿಡ್ತಾರೋ ನಂಗೇನೂ ಸಂಬಂಧ ಇಲ್ಲ. ನನಗೆ ಬೇಕಾಗಿದ್ದು ನನ್ನ ಮಕ್ಕಳನ್ನ ಚೆನ್ನಾಗಿ ಬೆಳೆಸಿ ಅವರಿಗೆ ಶಕ್ತಿ ಕೊಡೋಹಾಗೆ ದೇವರನ್ನ ಪ್ರಾರ್ಥಿಸೋದು.. ನನ್ನ ಗಂಡ ನಿರಂತರವಾಗಿ ಮುಂದೆ ನಾವೇನು ಮಾಡ್ಬೇಕು ಅನ್ನೋದನ್ನ, ನಾನು ಅವನ ಜೊತೆ ವಾದ ನಿಲ್ಲಿಸುವ ತನಕ ಮಾತಾಡಿದ... *

---

೧೩ನೇ ಪುಟದಿಂದ)

"ನಮಗೇನಾದರೂ ಶಸ್ತ್ರ ಧರಿಸಲು ಅಧಿಕಾರ ಕೊಟ್ಟಿದ್ದಲ್ಲಿ ಈ ದೇಶ ಪಾರತಂತ್ರ್ಯಕ್ಕೆ ಒಳಗಾಗುತ್ತಿರಲಿಲ್ಲ" ಎಂದು ಒತ್ತಿ ಹೇಳಿದ್ದರು. ಇದು ಬಾಬಾಸಾಹೇಬರ ಮನಸ್ಸನ್ನೂ ರಾಷ್ಟ್ರ ಪ್ರೇಮವನ್ನೂ ಸೂಚಿಸುತ್ತದೆ. ಅಲ್ಲದೆ ಬುದ್ಧ, ಕ್ಷತ್ರಿಯನಾಗಿದ್ದ ಎಂದು ನೆನೆಯಬೇಕು! ಕರ್ನಾಟಕದಲ್ಲಿ, ಎಡಗೈ – ಬಲಗೈ ಎಂದು ದಲಿತರಲ್ಲಿ ಹೇಳುತ್ತಾರಲ್ಲ, ಈ ಎಡಗೈ, ಬಲಗೈ ಎಂಬ ನಿರ್ದೇಶ, ತೋಳುಗಳೇ ಕ್ಷತ್ರಿಯರು ಎನ್ನುವ ವರ್ಣ ವ್ಯವಸ್ಥೆಯ ಪರಿಭಾಷೆಯಾಗಿಯೂ ಕೇಳಿಸಬಹುದು! ಬಾಬಾ ಸಾಹೇಬರು, ಗಾಂಧಿಯನ್ನು ಒಪ್ಪದಿರುವುದು ಸಹಜವಾಗಿದೆ. ಅದರೆ ಬುದ್ಧನ ಕಡೆಗೆ ಅವರ ನಡಿಗೆ ಒಂದು ಅರ್ಥದಲ್ಲಿ ಗಾಂಧಿಯ ಕಡೆಗೆ ನಡೆದಂತೆಯೇ ಆಗಿದೆ.



(ಪುತ್ತೂರಿನಲ್ಲಿರುವ ಲಕ್ಷೀಶ ತೋಳ್ಪಾಡಿ ಕನ್ನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳನ್ನು ಬಲ್ಲವರಾಗಿದ್ದು ಲೌಕಿಕ-ಪಾರಮಾರ್ಥಿಕವೆನ್ನದೆ ಎಲ್ಲ ಪಠ್ಯಗಳನ್ನೂ ಗಂಭೀರವಾಗಿ ಅಭ್ಯಸಿಸಿ ಬರೆಯುವ ನಮ್ಮ ನಡುವಿನ ಅಪರೂಪದ ಚಿಂತಕ.)

# ಅಂಬೇಡ್ಕರ್-ಗಾಂಧಿ ಮುಖಾಮುಖಿ: ಎರಡು ನೋಟಗಳು

ಅಂಬೇಡ್ಕರ್-ಗಾಂಧಿ ನಡುವೆ ನಡೆದ ವಾಗ್ವಾದವನ್ನು ಗಮನಿಸಿದಾಗ ಇಂದಿನ ಸಂದರ್ಭಕ್ಕೆ ಪ್ರಸ್ತುತವೆನಿಸುವ ಎರಡು ಪ್ರಶ್ನೆಗಳನ್ನು ಪತ್ರಿಕೆ ರೂಪಿಸಿ ಉತ್ತರಗಳಿಗಾಗಿ ಹಲವರನ್ನು ಕೇಳಿತು. ಆ ಪ್ರಶ್ನೆಗಳೆಂದರೆ:

೧. ಗಾಂಧಿ, ಅಂಬೇಡ್ಕರ್‌ರನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದಂತೆ ಅಂಬೇಡ್ಕರ್ ಗಾಂಧಿಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದರು ಎಂದು ನಿಮಗೆ ಅನ್ನಿಸುತ್ತದೆಯೆ? ಪ್ರಯತ್ನಿಸಿಲ್ಲವಾದರೆ, ಏಕೆಂದು ನೀವು ಭಾವಿಸುವಿರಿ?

೨. ಕೆಲವು ವಲಯಗಳಲ್ಲಿ ಇನ್ನೂ ಚಾಲ್ತಿಯಲ್ಲಿರುವ ಗಾಂಧಿ v/s ಅಂಬೇಡ್ಕರ್ ವಾಗ್ವಾದವನ್ನು ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಪುನರ್‌ವಿನ್ಯಾಸಗೊಳಿಸುವುದರ ಅನಿವಾರ್ಯತೆ ಇದೆಯೇ? ಹಾಗಿದ್ದಲ್ಲಿ ಅದರ ಮುಖ್ಯ ನೆಲೆಗಳಾದರೂ ಯಾವುವಾಗಿರಬೇಕು?

ಇಬ್ಬರು ನೀಡಿದ ಉತ್ತರಗಳನ್ನು ಓದುಗರ ಅವಗಾಹನೆಗಾಗಿ ಇಲ್ಲಿ ನೀಡುತ್ತಿದ್ದೇವೆ.–ಸಂಪಾದಕ

## ಡಾ. ನಿತ್ಯಾನಂದ ಬಿ. ಶೆಟ್ಟಿ, ತುಮಕೂರು

೧. ಗಾಂಧಿ ಮತ್ತು ಅಂಬೇಡ್ಕರ್ ನಡುವೆ ಇರುವ ಮೂಲಭೂತ ವ್ಯತ್ಯಾಸವೇನೆಂದರೆ ಗಾಂಧಿ ಓರ್ವ ದಾರ್ಶನಿಕರೂ ಮತ್ತು ನೈತಿಕವಾದಿಯೂ ಆಗಿದ್ದರು. ಅಂಬೇಡ್ಕರ್ ಓರ್ವ ಆಧುನಿಕ ಮತ್ತು ವೈಚಾರಿಕ ಹಿನ್ನೆಲೆಯ ಸಮಾಜವಿಜ್ಞಾನಿಯಾಗಿದ್ದರು. ಅಂಬೇಡ್ಕರ್ ಜೊತೆಗಿನ ತಮ್ಮ ಬೌದ್ಧಿಕ ಜಗಳದಲ್ಲಿ ಗಾಂಧಿ ಕಂಡುಕೊಂಡಿದ್ದು ಏನೆಂದರೆ, ಈ ಸಮಾಜ ಒಂದು ಸಮಾಜ ಅಲ್ಲ. ಇಲ್ಲಿ ಹಲವು ಸಮಾಜಗಳಿವೆ. ಮತ್ತು ಇವು ಅಸ್ತವ್ಯಸ್ತವಾಗಿ ಸಾಮಾಜಿಕ ಕೊಳಕು ಮತ್ತು ಹುಳುಕುಗಳೊಂದಿಗೆ ಇವೆ. ಇದನ್ನು ನೈತಿಕ ಕ್ರಿಯಾಚರಣೆಗಳ ಮೂಲಕ ಸಮೂಲ ನಾಶಮಾಡಬಹುದು ಎಂದು ಗಾಂಧಿ ಭಾವಿಸಿದ್ದರು. ಆದರೆ ಅಂಬೇಡ್ಕರ್ ಇದನ್ನು ಕಾನೂನು–ಶಾಸನ ಇತ್ಯಾದಿ ಬಾಹ್ಯ ಕ್ರಿಯಾಚರಣೆಗಳ ಮೂಲಕವೇ ನಾಶಮಾಡಬಹುದು ಎಂದು ಭಾವಿಸಿದ್ದರು. ಪ್ರಾಯಶಃ ಗಾಂಧಿಯವರದ್ದು ರೋಗದ ಮೂಲೋತ್ಪಾಟನೆಯಾಗಿದ್ದರೆ ಅಂಬೇಡ್ಕರ್‌ರವರದ್ದು ರೋಗವನ್ನು ತಕ್ಷಣಕ್ಕೆ ತಹಬಂದಿಗೆ(ಕಂಟ್ರೋಲ್) ತರುವುದು ಆಗಿತ್ತು. ಅಂಬೇಡ್ಕರ್ ಮೀಸಲಾತಿಯ ಕಾನೂನಿನಿಂದ ಮತ್ತು ನೆಹರೂ ಆಧುನೀಕರಣದಿಂದ ಈ ಅಸಮ ಸಮಾಜವನ್ನು ಸಮಗೊಳಿಸಬಹುದು ಎಂದು ಭಾವಿಸಿದ್ದರು. ಯಾಕೆಂದರೆ ಇವರಿಬ್ಬರೂ ಪಶ್ಚಿಮದ ಆಧುನಿಕತೆಗೆ ಜನಿಸಿದ ಶಿಶುಗಳು.

ಗಾಂಧಿ ಆಧುನಿಕತೆಯನ್ನು ಹತ್ತು–ಹಲವು ಅನುಮಾನಗಳಿಂದಲೇ ನೋಡಿ, ಆಧುನಿಕತೆಯನ್ನು ಪರೀಕ್ಷೆಗೊಡ್ಡಿ ಅದರ ಟೊಳ್ಳುತನವನ್ನು ಮನಗಂಡವರು. ಹಾಗಾಗಿ ಸಮ ಸಮಾಜದ ಬಗ್ಗೆ ಗಾಂಧಿಯವರದ್ದು ದೀರ್ಘಾವಧಿಯ ಶಾಶ್ವತ ಯೋಜನೆಯಾಗಿದ್ದರೆ ಅಂಬೇಡ್ಕರ್‌ರವರದ್ದು ಅಲ್ಪಾವಧಿಯ ಫಲಿತಾಂಶ ಕೇಂದ್ರಿತ ಯೋಜನೆಯಾಗಿತ್ತು. ಗಾಂಧಿ–ಅಂಬೇಡ್ಕರ್ ವಾಗ್ವಾದವನ್ನು ಗಮನಿಸಿದರೂ ಗಾಂಧಿಯ ಮಾತುಗಳಲ್ಲಿ ಅಪಾರವಾದ ತಾಳ್ಮೆ ಇತ್ತು. ಅಂಬೇಡ್ಕರ್ ಮಾತುಗಳಲ್ಲಿ ಅಪಾರವಾದ ಅವಸರವಿತ್ತು. (ಗಾಂಧಿಯವರ ತಾಳ್ಮೆಗೆ ಮತ್ತು ಅಂಬೇಡ್ಕರ್‌ರವರ ಅವಸರಕ್ಕೆ ಅವರ ಸಾಂಸ್ಕೃತಿಕ ಹಿನ್ನೆಲೆಗಳು ಕಾರಣವಾಗಿದ್ದವು) ಆಧುನಿಕತೆ ತಂದಿತ್ತಿರುವ ಲಕ್ಷಣ ಮತ್ತು ಅವಲಕ್ಷಣ. ಈ ಮಾತಿನ ಹಿನ್ನೆಲೆಯಲ್ಲಿ ಮೊದಲ ಪ್ರಶ್ನೆಗೆ ನನ್ನ ನೇರ ಉತ್ತರ ಏನೆಂದರೆ ಗಾಂಧಿ ಅಂಬೇಡ್ಕರ್‌ರಿಂದ ಕಲಿತರು ಓರ್ವ ವಿಧೇಯ ವಿದ್ಯಾರ್ಥಿಯಂತೆ. ಆದರೆ ಅಂಬೇಡ್ಕರ್ ಗಾಂಧಿಯಿಂದ ಏನನ್ನೂ ಕಲಿಯಲು ನಿರಾಕರಿಸಿದರು ಸಿಡುಕು ಮತ್ತು ಅಸಹನೆಯ ಗುರುವಿನಂತೆ. ಇಲ್ಲೇ ಒಂದು ಸೂಕ್ಷ್ಮವನ್ನೂ ಗಮನಿಸಬೇಕು. ಈ ಸಿಡುಕು ಪ್ರಾಯಶಃ ಅಂಬೇಡ್ಕರ್‌ರದ್ದೂ ಆಗಿದ್ದಿರಲಿಕ್ಕಿಲ್ಲ. ಆ ಕಾಲದ ಸಮಾಜದ ಕೆಡುಕು ಅಂಬೇಡ್ಕರ್‌ರವರಲ್ಲಿ ಈ ಸಿಡುಕನ್ನು ಬೆಳೆಸಿತ್ತು. ಆಧುನಿಕ ಸಮಾಜವಿಜ್ಞಾನಿಯಾದ ಅಂಬೇಡ್ಕರ್‌ಗೆ ಈ ತೊಡಕನ್ನು ಮೀರಲಾಗಲಿಲ್ಲ. ಕಾನೂನು ಎಂಬ ಬುಲ್‌ಡೋಜರ್ ಅನ್ನು ಬಳಸಿ ಅಸಮವಾಗಿರುವ ಈ ಸಮಾಜವನ್ನು ಸಮಗೊಳಿಸಬಹುದೆಂದು ಅಂಬೇಡ್ಕರ್ ಭಾವಿಸಿದ್ದರು. ಕಾನೂನು/ವಕೀಲಿ ಆಧುನಿಕತೆಯ ವಿಕಾರಗಳು, ಅವುಗಳಿಂದ ಈ ಸಮಾಜವನ್ನು ಆಮೂಲಾಗ್ರವಾಗಿ ಬದಲಾಯಿಸಲು ಸಾಧ್ಯವಿಲ್ಲ ಎಂದೇ ಗಾಂಧಿ ಭಾವಿಸಿದ್ದರು.

೨. ಎರಡನೆಯ ಪ್ರಶ್ನೆ ಏನೆಂದೇ ನನಗೆ ಅರ್ಥವಾಗಿಲ್ಲ. ಹಾಗಾಗಿ ಆ ಪ್ರಶ್ನೆಗೆ ನನ್ನ ಉತ್ತರ ಇಲ್ಲ.



(ತುಮಕೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾಗಿರುವ ನಿತ್ಯಾನಂದ ಶೆಟ್ಟಿ ಅವರು ವಿಶ್ವವಿದ್ಯಾಲಯದ ವಿದ್ವತ್‌ಪತ್ರಿಕೆ 'ಲೋಕಜ್ಞಾನ'ದ ಸಂಪಾದಕರೂ ಹೌದು)

## ಡಾ. ಎಂ. ಗಣೇಶ್, ಹೆಗ್ಗೋಡು

೧. ಭಾರತ ಬ್ರಿಟೀಷರಿಂದ ದಾಸ್ಯಕ್ಕೆ ಒಳಗಾಗಿದೆ ಆದ್ದರಿಂದ ನಾವೆಲ್ಲರೂ ಒಗ್ಗಟ್ಟಾಗಿ ಹೋರಾಡಿ ಬ್ರಿಟೀಷರಿಂದ ಬಂಧಮುಕ್ತರಾಗಬೇಕೆಂಬುದು ಇಲ್ಲಿನ ಎಲ್ಲರ ಹೆಬ್ಬಯಕೆಯಾಗಿತ್ತು. ಸರಿ. ಆದರೆ ಸಾವಿರಾರು ವರ್ಷಗಳಿಂದ ಮೇಲು ಜಾತಿಗಳ ಸಕಲೆಂಟು ಸೇವೆ ಮಾಡುತ್ತ ರಾಜಮಹಾರಾಜರ ಪದತಳದಲ್ಲಿ ಧೂಳಿನಂತಿದ್ದು ಸ್ವಾತಂತ್ರ್ಯ ಸಂಗ್ರಾಮ ಮತ್ತು ಆನಂತರದ ದಿನಗಳಲ್ಲಿ ಸ್ವಾತಂತ್ರ್ಯ ಮತ್ತು ಸಮತೆಗಳು ದಲಿತರಿಗೆ ದೂರದ ಮಾತಾಗುವ ಎಲ್ಲ ಲಕ್ಷಣಗಳನ್ನು ಮನಗಂಡಿದ್ದ ಅಂಬೇಡ್ಕರರು ತಾಯಿಯಂತಿದ್ದ ಗಾಂಧಿಯ ಎದುರಿಗೆ ಹಲವು ವಿಷಯಗಳಲ್ಲಿ ಪ್ರಾಮಾಣಿಕವಾಗಿ ಮನೆಯ ಹಿರಿಮಗನಂತೆ ವಾದ ಮಾಡುವುದು, ಪಟ್ಟುಹಿಡಿಯುವುದು ಸಮಂಜಸವೆನಿಸುತ್ತದೆ. ಏಕೆಂದರೆ ಭಾರತದಲ್ಲಿರುವ ಪ್ರಬಲ ಜಾತಿಗಳು, ಅವುಗಳು ಸ್ಥಾಪಿಸಿಕೊಂಡಿರುವ ಮೌಲ್ಯಗಳು ಅಂಬೇಡ್ಕರ್ ಕಣ್ಣಿಗೆ ಯಾವತ್ತೂ ಬದಲಾಗದ ಹಠಮಾರಿ ತಂದೆಯಂತೆ ಕಾಣುತ್ತವೆ. ಇವತ್ತಿಗೂ ಹಠಮಾರಿ ತಂದೆಯ ಅಪರಾವತಾರಗಳು ಬೇರೆ ಬೇರೆ ರೂಪದಲ್ಲಿ ನಮ್ಮ ನಡುವಿರುವುದನ್ನು ನೋಡಬಹುದು. ಹಾಗಾಗಿ ಜೀವಮಾನವಿಡೀ ಬದಲಾಗುತ್ತಲೇ ಮುನ್ನಡೆದ ಗಾಂಧಿಯಂಥವರು ಅಂಬೇಡ್ಕರರನ್ನು ಅರ್ಥ ಮಾಡಿಕೊಳ್ಳದೆ ಆ ಕಾಲದ ಇನ್ಯಾರು ಅರ್ಥ ಮಾಡಿಕೊಳ್ಳಬೇಕಿತ್ತು? ..........ಪಟೇಲರು? ತಿಲಕರು?

೨. ನಾನು ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ೧೯೮೦ರ ದಶಕ ಅತ್ಯಮೂಲ್ಯವಾಗಿತ್ತು. ನನ್ನ ವಿದ್ಯಾಭ್ಯಾಸದ ಜೊತೆಗೆ ಸಮತಾ ಸೈನಿಕದಳ, ದಲಿತ ಸಂಘರ್ಷ ಸಮಿತಿ, ಬಹುಜನ ವಿದ್ಯಾರ್ಥಿ ಒಕ್ಕೂಟ, ಬಹುಜನ ಸಮಾಜ ಪಕ್ಷ ಹೀಗೆ ದಲಿತ ಸಂಘಟನೆಗಳು ಮತ್ತು ಪಕ್ಷದ ಸಖ್ಯ ನನಗೆ ದಕ್ಕಿತ್ತು. ಆ ಸಂದರ್ಭದಲ್ಲಿ ಅಂಬೇಡ್ಕರ್ ಮಾತ್ರ ನಮ್ಮ ಏಕೈಕ ನಾಯಕ. ಆತ ಹೇಳಿದನೆಂದು ನಮ್ಮ ನಾಯಕರು ಹೇಳುತ್ತಿದ್ದ ಪ್ರತಿಯೊಂದು ಮಾತೂ ನಮಗಾಗ ವೇದವಾಕ್ಯವಾಗಿತ್ತು. ಗಾಂಧಿ ಎಂದರೆ ನಾವೆಲ್ಲ ಉರಿದು ಬೀಳುತ್ತಿದ್ದೆವು. ಗಾಂಧಿ ಮತ್ತು ಅಂಬೇಡ್ಕರ್ ಎಂದರೆ ಪರಮಶತ್ರುಗಳೆಂದು ಭಾವಿಸಿಕೊಂಡಿದ್ದೆವು. ಕೆಲವು ಕಾಂಗ್ರೆಸ್ ಪ್ರಣೀತ ದಲಿತ ಸಂಘಟನೆಗಳಿಗೆ ಗಾಂಧಿಯ ಕುರಿತಾಗಿ ಮೃದು ಧೋರಣೆ ಇತ್ತಾದರೂ ಅವೂ ಸಹ ತಮ್ಮ ಕಾರ್ಯಕ್ರಮಗಳಲ್ಲಿ ಗಾಂಧಿ ಅಂಬೇಡ್ಕರರ ಫೋಟೋಗಳನ್ನು ಅಪ್ಪಿತಪ್ಪಿಯೂ ಅಕ್ಕಪಕ್ಕದಲ್ಲಿಡುತ್ತಿರಲಿಲ್ಲ. ಅಂಬೇಡ್ಕರ್ ಫೋಟೋ ಮೂರು ಮಾರುದ್ದದ ಬಲತುದಿಯಲ್ಲಿದ್ದರೆ ಗಾಂಧಿ ಫೋಟೋ ಎಡತುದಿಯಲ್ಲಿರುತ್ತಿತ್ತು. ಕೆಲವು ಭಾಷಣಕಾರರು ಆ ಎರಡು ಫೋಟೋಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಸಾಧ್ಯವಿಲ್ಲವೆಂದು ಹೇಳುತ್ತಿದ್ದರು.. ಈಗ ಅದೆಲ್ಲ ನೆನಪಾದರೆ ತಳಮಳಗೊಳ್ಳುವಂತಾಗುತ್ತದೆ. ಈ ಗಾಢವಾದ ಮಾನಸಿಕ ತಳಮಳ ಯಾಕೆಂದರೆ ಅಂಬೇಡ್ಕರ್ ಮತ್ತು ಗಾಂಧಿಯನ್ನು ಹೀಗೆ ವಿಘಟಿಸಿದ ಕಾರಣಕ್ಕಾಗಿ. ಭಾರತದ ಭವಿತವ್ಯದ ದೃಷ್ಟಿಯಿಂದ ಇನ್ನು ಮುಂದಾದರೂ ಈ ವಿಘಟನೆಗಳು ನಿಲ್ಲಬೇಕೆಂದು ಎಲ್ಲರೂ ಆಶಿಸಬೇಕಾಗಿದೆ. ಅವರಿಬ್ಬರ ಸರ್ವಶ್ರೇಷ್ಠ ವಿಚಾರಗಳನ್ನು ಇನ್ನೂ ಅನೇಕರೊಂದಿಗೆ ಸಮ್ಮೇಳಗೊಳಿಸಿ ಹೊಸ ರೀತಿಯ ಹಾಡು–ನಡಿಗೆಗಳನ್ನು ರೂಢಿಸಿಕೊಳ್ಳಬೇಕಿದೆ.



(ಹೆಗ್ಗೋಡಿನ *ನೀನಾಸಂ* ರಂಗಶಿಕ್ಷಣ ಕೇಂದ್ರದಲ್ಲಿ ಅಧ್ಯಾಪಕರಾಗಿರುವ ಎಂ. ಗಣೇಶ್, ತಮ್ಮ 'ಜನಮನದಾಟ' ರಂಗತಂಡದ ಮೂಲಕವೂ ವಿಶಿಷ್ಟ ಪ್ರಯೋಗಗಳನ್ನು ನೀಡಿದವರು. ಅವರ ನಿರ್ದೇಶನದ ಗಾಂಧಿ ಮತ್ತು ಅಂಬೇಡ್ಕರ್ ಕುರಿತ ನಾಟಕಗಳು ವಿಶೇಷ ಗಮನ ಸೆಳೆದಿವೆ.)

ಕಲೆ-ಸಂಸ್ಕೃತಿ-ರಾಜಕಾರಣ

# ಒಂದು ಪಾಕಿಸ್ತಾನಿ ಚಲಚಿತ್ರ ಹಾಗೂ ಹವಾ ನಿಯಂತ್ರಣದ ಸುಖ!



**ಮು**ಸ್ಲಿಮರ ಬಗ್ಗೆ ಅಷ್ಟೇನೂ ಪ್ರೀತಿಯಿಲ್ಲದ ನನ್ನ ಸ್ನೇಹಿತರೊಬ್ಬರು ಮೊನ್ನೆ ಇದ್ದಕ್ಕಿದ್ದಂತೆ 'ನೀವು ಒಂದು ಪಾಕಿಸ್ತಾನಿ ಚಿತ್ರವನ್ನು ನೋಡಲೇಬೇಕು' ಎಂದು ಅದನ್ನು ಅಂತರ್ಜಾಲದಿಂದ ಇಳಿಸಿಕೊಂಡು ಬಂದು ನನ್ನ ಗಣಕಕ್ಕೆ ಏರಿಸಿ ನನ್ನ ಕೆಲಸಗಳ ಮಧ್ಯೆ ಚಿತ್ರವನ್ನು ಮತ್ತೊಮ್ಮೆ ನೋಡಲು ಕೂತಾಗ ನನಗೆ ಕಸಿವಿಸಿಯ ಜೊತೆಗೆ ಆಶ್ಚರ್ಯವೋ ಆಶ್ಚರ್ಯ. ಚಿತ್ರದ ಪ್ರತಿದೃಶ್ಯದ ಪ್ರತಿ ವಿವರವನ್ನೂ ಆಸ್ವಾದಿಸುತ್ತಾ, 'ಈತನ ಅಭಿನಯ ನೋಡಿ ಸಾರ್! ಈ ಸಂಭಾಷಣೆಯನ್ನ ಹುಷಾರಾಗಿ ಕೇಳಿಸಿಕೊಳ್ಳಿ ಸಾರ್!' ಎಂದು ಒಂದು ಚಲಚಿತ್ರ ರಸಗ್ರಹಣ ಶಿಬಿರವನ್ನೇ ಆರಂಭಿಸಿದಾಗ ನಾವು ಅವರಿಗೆ ಚಿತ್ರವನ್ನು ಬಿಡುವಾಗಿ ನೋಡಿದರೇ ಚೆಂದ ಎಂದು ಹೇಳಿ ಆ ಶಿಬಿರದಿಂದ ಪಾರಾದೆವಾದರೂ, ಮುಸ್ಲಿಂ ಸಮಾಜವನ್ನು ಕುರಿತ ಅವರ ಪೂರ್ವಗ್ರಹಗಳು ಈಗ ಸಂಪೂರ್ಣ ಕರಗಿಹೋಗಿರುವುದನ್ನು ನಾವು ಗಮನಿಸದೇ ಇರಲಿಲ್ಲ.

ಒಂದೆರಡು ದಿನಗಳಲ್ಲಿ ನಾವು ಆ ಚಲಚಿತ್ರವನ್ನು ಪೂರ್ಣ ನೋಡಿದೆವು. ಅದರ ಹೆಸರು 'ಬೋಲ್' ಕನ್ನಡದಲ್ಲಿ ಅದನ್ನು 'ಸೊಲ್ಲು' ಅಥವಾ 'ಮಾತಾಡು' ಎಂದು ಅನುವಾದಿಸಬಹುದೇನೋ. ಅದು ಪಾಕಿಸ್ತಾನದ ಪ್ರಸಿದ್ಧ ನಿರ್ದೇಶಕ ಶೋಯಬ್ ಮನ್ಸೂರ್ ಅವರ ಇತ್ತೀಚಿನ ಚಿತ್ರ. ಚಿತ್ರ ಅಪ್ಪಟ ಉರ್ದು ಭಾಷೆಯಲ್ಲಿರುವುದರಿಂದ ಅದರ ಪ್ರತಿ ವಿವರವನ್ನೂ ಗ್ರಹಿಸುವುದು ಕಷ್ಟ. ಆದರೆ ಈ ಚಿತ್ರ ನೋಡಿದ ಯಾವ ಸಾಮಾನ್ಯ ಭಾರತೀಯನಾದರೂ ನನ್ನ ಗೆಳೆಯರಂತೆಯೇ ಪಾಕಿಸ್ತಾನ ಕುರಿತಂತೆ ಮತ್ತು ಅಲ್ಲಿನ ಮುಸ್ಲಿಂ ಸಂಸ್ಕೃತಿ ಕುರಿತಂತೆ ತಮ್ಮಲ್ಲಿರಬಹುದಾದ ದುರಭಿಪ್ರಾಯಗಳನ್ನು ನಿಧಾನವಾಗಿಯಾದರೂ ಕಳೆದುಕೊಳ್ಳುವುದು ಖಂಡಿತ. ನಿಧಾನವಾಗಿಯಾದರೂ ಎಂದು ಏಕೆ ಹೇಳುತ್ತಿರುವೆನೆಂದರೆ, ನನ್ನ ಗೆಳೆಯರಂತೆಯೇ ಈ ಚಿತ್ರ ಅಂತಹವರಲ್ಲಿ ಅಷ್ಟು ಸುಲಭವಾಗಿ ನೆನಪಿನಿಂದ ಜಾರದೆ ಕಾಡುತ್ತಾ, ಪಾಕಿಸ್ತಾನ, ಅಲ್ಲಿನ ಮುಸ್ಲಿಂ ಸಮುದಾಯ ಎಲ್ಲ ನಮ್ಮದೇ ಭಾಗವಲ್ಲವೇ ಎಂಬ ಆಳದ ಅರಿವನ್ನು ಹುಟ್ಟುಹಾಕುತ್ತದೆ.

ಚಿತ್ರ ಲಾಹೋರ್ ಪಟ್ಟಣದಲ್ಲಿನ ಒಬ್ಬ ಮಧ್ಯಮ ವರ್ಗದ ಹಕೀಮನಿಗೆ ಏಳೆಂಟು ಹೆಣ್ಣು ಮಕ್ಕಳ ನಂತರ ಒಂದು ತೃತೀಯ ಲಿಂಗಿಯಾದ ಸಂತಾನವಾಗುವ ಸಂಗತಿಯ ಸುತ್ತ ಕಟ್ಟಿಕೊಳ್ಳುವ ಒಂದು ಕೌಟುಂಬಿಕ ದುರಂತವನ್ನು ಅದರೊಳಗೆ ಹೆಣೆದುಕೊಂಡಿರುವ, ಧಾರ್ಮಿಕ ಮೌಢ್ಯ, ಅದರಿಂದ ಬೆಂಬಲ ಪಡೆದ ಗಂಡು ಯಜಮಾನಿಕೆಯ ಕ್ರೌರ್ಯ ಮತ್ತು ಅದರ ಮಧ್ಯೆ ದಮನಗೊಂಡ ಹೆಣ್ಣು ದನಿ ಎತ್ತಲು ನಡೆಸುವ ವಿಫಲ ಪ್ರಯತ್ನ- ಇವುಗಳನ್ನು ಎಲ್ಲೂ ಯಾವುದೇ ಪಕ್ಷ ವಹಿಸದೆ ಸಾಕ್ಷಿಪ್ರಜ್ಞೆಯೊಡನೆ ಮಂಡಿಸುವ ಮೂಲಕ ನಮ್ಮನ್ನು ತೀವ್ರವಾಗಿ ಕಾಡುತ್ತದೆ. ವಿಶಾಲ ನೆಲೆಯಲ್ಲಿ ಇದು ಕೇವಲ ಪಾಕಿಸ್ತಾನದ, ಮುಸ್ಲಿಂ ಕುಟುಂಬದ ಕಥೆಯಾಗಿರದೆ ನಮ್ಮೆಲ್ಲರ ಕಥೆ ಎನಿಸುತ್ತದೆ.

ಸಾಮಾಜಿಕ ಮುಜುಗರದಿಂದ ಅಸಹಾಯಕನಾಗಿ ತನ್ನ ತೃತೀಯ ಲಿಂಗಿ 'ಮಗ'ನನ್ನು ಧಾರ್ಮಿಕ 'ಸಮ್ಮತಿ'ಯೊಂದಿಗೆ ಕೊಂದು, ಅದರ ಮೊಕದ್ದಮೆಯಿಂದ ಪಾರಾಗಲು ಹಕೀಮ ನಡೆಸುವ ಸಾರ್ವಜನಿಕ ಹಣಕಾಸಿನ ದುರುಪಯೋಗ, ಅದರಿಂದ ಮತ್ತೆ ಪಾರಾಗಲು ಮತ್ತೆ ಧಾರ್ಮಿಕ 'ಸಮ್ಮತಿ'ಯೊಂದಿಗೆ ವೇಶ್ಯಾವಾಟಿಕೆಯೊಂದಕ್ಕಾಗಿ ವೇಶ್ಯೆಯೊಬ್ಬಳಿಗೆ ಹೆಣ್ಣು ಸಂತಾನ ಕರುಣಿಸಿ ಹಣ ಪಡೆಯುವುದು; ಆದರೆ ಆ ಹೆಣ್ಣು ಮಗುವನ್ನು ವೇಶ್ಯಾವಾಟಿಕೆಗೆ ಒಪ್ಪಿಸಲಾಗದ ಹಕೀಮನ ಸಂಕಟ, ಅಲ್ಲಿನ ಪೋಲೀಸು, ಅದರ ಭ್ರಷ್ಟಾಚಾರ, ತೃತೀಯ ಲಿಂಗಿ 'ತಮ್ಮ'ನನ್ನು ಅವನ ಅಕ್ಕಂದಿರು ಪ್ರೀತಿಯಿಂದ ಲಾಲಿಸುವ ಪರಿ, ತೃತೀಯ ಲಿಂಗಿಯ ಬದುಕಿನ ಸಂದಿಗ್ಧತೆಗಳು, ಶಿಯಾ-ಸುನ್ನಿ ಒಡಕು, ಭಾರತ-ಪಾಕಿಸ್ತಾನ ಕ್ರಿಕೆಟ್ ಹುಟ್ಟಿಸುವ ಭಾವಾವೇಶ, ಇವೆಲ್ಲ ಚಿತ್ರದಲ್ಲಿ ಎಷ್ಟು ಸಹಜವಾಗಿ ಮೂಡಿ ಬಂದಿವೆಯೆಂದರೆ ಇಲ್ಲಿ ಎಲ್ಲರೂ-ಗಂಡು ದರ್ಪದ ಹಕೀಮ ಮತ್ತು ಕೊನೆಯಲ್ಲಿ ಆತನನ್ನು ಕೊಂದು ಗಲ್ಲು ಶಿಕ್ಷೆಗೆ ಒಳಗಾಗುವ ಕುಟುಂಬದ ಹಿರಿಮಗಳೂ ಸೇರಿದಂತೆ-ಬಹಿರಂಗವಾಗಿ ಧಿಕ್ಕರಿಸಲಾಗದ ವ್ಯವಸ್ಥೆಯೊಂದರ ಸಹಜ ಬಂದಿಗಳಾಗಷ್ಟೆ ಕಾಣುತ್ತಾರೆ. ಈ ವಿಷಾದವೇ ಈ ಚಿತ್ರದಲ್ಲಿ ನಮ್ಮನ್ನು ಮುತ್ತುವುದು.

ಶೋಯಬ್ ಮನ್ಸೂರ್

ಚಿತ್ರ ನಿರೂಪಣೆಯ ತಂತ್ರವೂ ಎಷ್ಟು ಕುತೂಹಲಕಾರಿಯಾಗಿದೆಯೆಂದರೆ ಚಿತ್ರ ನಿರೂಪಿತವಾಗುವುದು ಗಲ್ಲುಶಿಕ್ಷೆಗೆ ಗುರಿಯಾಗಿರುವ ಹೆಣ್ಣುಮಗಳು ಹೇಳುವ ಅವಳ ಕಥೆಯಾಗಿ; ಹಾಗೂ ಅವಳ ನಿರಪರಾಧಿತ್ವವನ್ನು ಮನಗಂಡು ಅವಳನ್ನು ಗಲ್ಲುಶಿಕ್ಷೆಯಿಂದ ಪಾರು ಮಾಡಲು ಕೊನೆಯ ಕ್ಷಣದ ವಿಫಲ ಪ್ರಯತ್ನ ಮಾಡುವುದೂ ಓರ್ವ ದಿಟ್ಟ ಮಹಿಳಾ ಪತ್ರಕರ್ತೆಯೇ. ಅದೂ ಆಕೆ ನೇರವಾಗಿ ದೇಶದ ಅಧ್ಯಕ್ಷರಿಗೆ ದೂರವಾಣಿ ಕರೆ ಮಾಡಿ ಈ 'ಅನ್ಯಾಯ'ವನ್ನು ತನ್ನ ಟಿವಿ ವಾಹಿನಿಯ ಮೂಲಕ ಬಯಲು ಮಾಡುವುದಾಗಿ ಎಚ್ಚರಿಸುವ ಮೂಲಕ! ಈ ದೃಷ್ಟಿಯಿಂದ ಇದೊಂದು ಸಾಂಪ್ರದಾಯಿಕ ಧರ್ಮ, ಸಮಾಜ, ಕುಟುಂಬ ವ್ಯವಸ್ಥೆಯ ಮೇಲೆ ಕ್ಷ-ಕಿರಣ-ಬೀರುವ ಪ್ರಖರ ಮಹಿಳಾ ದೃಷ್ಟಿಕೋನದ ಚಿತ್ರ ಮಾತ್ರವಲ್ಲ, ಒಂದು ನೆಲೆಯಲ್ಲಿ ಪಾಕಿಸ್ತಾನದ ಸಮಾಜ ಮತ್ತು ಪ್ರಭುತ್ವಗಳ ಸ್ವರೂಪ ಕುರಿತಂತೆ ನಮಗೆ ಹೊಸ-ಹೊಳಹು ನೀಡುವ ರಾಜಕೀಯ ಚಿತ್ರ ಕೂಡ.

ಚಿತ್ರದಲ್ಲಿ ಒಂದು ಪ್ರೇಮ ಕಥೆಯೂ ತೆಳುವಾಗಿ ಹೆಣೆದುಕೊಂಡಿದೆ. ಪ್ರೇಮ ಗೀತೆಗಳೂ, ಆಧುನಿಕ ನೃತ್ಯಗಳೂ, ಕಣ್ಸೆಳೆಯುವ ಹೊರಾಂಗಣ ದೃಶ್ಯಗಳೂ ಇವೆ. ನಟ-ನಟಿಯರು ಅಪರಿಚಿತವೆನ್ನಿಸುವುದನ್ನು ಬಿಟ್ಟರೆ, ಅವರ ಎಲ್ಲ ಭಾವ-ಭಂಗಿಗಳೂ ನಮ್ಮವೇ. ಹಾಗಾಗಿ ಇದೊಂದು ಅಪ್ಪಟ ಭಾರತೀಯ ಚಿತ್ರವೇ ಎನ್ನಿಸಿಬಿಡುತ್ತದೆ. ಒಂದು ಮುಖ್ಯ ವ್ಯತ್ಯಾಸವೆಂದರೆ, ಅಲ್ಲಿಯ ಮನೆಯ(ಹವೇಲಿ)ಗಳ ಒಳಾಂಗಣಗಳು. ಅದೇನೇ ಇದ್ದರೂ, ಕಲೆ-ಅದೆಷ್ಟೇ ಸಾಮಾನ್ಯವಾಗಿರಲಿ-ಅದು ಎಲ್ಲ ಅನುಚಿತ ಪೂರ್ವಾಗ್ರಹಗಳ ಗೋಡೆಗಳನ್ನು ಒಡೆಯಬಲ್ಲುದು. ಇದಕ್ಕೆ 'ಬೋಲ್' ಸಾಕ್ಷಿ.

## ಹವಾಮಾನ ಬದಲಾವಣೆ V/S ಹವಾ ನಿಯಂತ್ರಣ!

ಈ ಬೇಸಿಗೆಯಲ್ಲಿ ಊರೂರಿನಲ್ಲಿ ಕೆಂಡ ಸುರಿದಂತೆ ಬಿಸಿಲು ಏರುತ್ತಿದೆ. ರಾಜ್ಯದ ಅರ್ಧಕ್ಕೂ ಹೆಚ್ಚು ಊರುಗಳಲ್ಲಿ ಉಷ್ಣಾಂಶ ೪೦ ಡಿಗ್ರಿ ಸೆ. ಮೀರಿ ದಾಖಲೆಗಳು ಸುಟ್ಟು ಬೂದಿಯಾಗುತ್ತಿವೆ. ಹಾಗೆ ನೋಡಿದರೆ ಜಗತ್ತಿನ ವಿವಿಧೆಡೆ ಉಷ್ಣಾಂಶ ಈ ವರ್ಷ ಶತಮಾನದ ದಾಖಲೆಗಳನ್ನು ಮೀರಿದ ಸುದ್ದಿಗಳು ಬರುತ್ತಿವೆ. ಹವಾಮಾನ ಬದಲಾವಣೆ ಕುರಿತ ಜಾಗತಿಕ ಒಪ್ಪಂದ ಕಾಗದಕ್ಕೆ ಸೀಮಿತವಾದಂತೆ, ಜನ ಮತ್ತು ಸರ್ಕಾರಗಳು ಮಾತ್ರ ಇದೆಲ್ಲ ಮಾಮೂಲು ಎಂಬಂತೆ ಕೆರೆ-ತೊರೆಗಳನ್ನು ಬತ್ತಿಸುತ್ತಾ, ಬೆಟ್ಟ-ಗುಡ್ಡ-ಮರಗಿಡಗಳಗಳನ್ನು ಸವರಿಹಾಕುತ್ತಾ ಊರುಗಳನ್ನು ಕಾಂಕ್ರೀಟ್-ಕಬ್ಬಿಣ-ಗಾಜಿನಿಂದ 'ಅಭಿವೃದ್ಧಿ'ಪಡಿಸುತ್ತಾ ಹೋಗುತ್ತಿದ್ದಾರೆ. ಇದರ ಮುಖ್ಯ ಫಲಾನುಭವಿಗಳಾದ ಬೆಂಗಳೂರಿನ(ಮತ್ತು ಇತರ ನಗರಗಳ) ಪ್ರತಿಷ್ಠಿತ ಜನ ಹೊರಗಿನ ಧಗೆ ಮತ್ತು ಧೂಳು ತಮ್ಮನ್ನು (ಮತ್ತು ಕುಂಟುಂಬಗಳನ್ನು) ಬಾಧಿಸದಂತೆ ರಕ್ಷಣೆ ಪಡೆಯಲೋ ಎಂಬಂತೆ ತಮ್ಮ ಕಾರುಗಳ ಕಿಟಕಿಗಳನ್ನು ಮುಚ್ಚಿಕೊಂಡು ಹವಾ ನಿಯಂತ್ರಣ ಹಚ್ಚಿಕೊಂಡು ಬಿಮ್ಮಗೆ ಓಡಾಡುತ್ತಿದ್ದಾರೆ. ಇದು ಎಷ್ಟು ದಿನ? ಅವರಿಗೆ ಗೊತ್ತಿದ್ದಂತಿಲ್ಲ! 'ದೇವರೇ ಇವರನ್ನು ಕ್ಷಮಿಸು; ತಾವೇನು ಮಾಡುತ್ತಿದ್ದಾರೆಂದು ಇವರಿಗೆ ಗೊತ್ತಿಲ್ಲ' ಎಂದು ಹೇಳಲು ಏಸು ಮತ್ತೆ ಶಿಲುಬೆಗೇರಬೇಕೋ ಏನೋ!.

-ಡಿಎಸ್ಸೆನ್

## ಪುಸ್ತಕಾವಲೋಕನ

ಪು: ಬಹುವಚನ ಭಾರತ ಲೇ: ಜಿ.ರಾಜಶೇಖರ ಪ್ರ: ಅಭಿನವ ಪ್ರಕಾಶನ, ಬೆಂಗಳೂರು, ೨೦೧೫. ಪು. ೩೦೦, ಬೆಲೆ: ರೂ.೨೫೦/-

### ಹಿಂಸೆಯ ಹಲವು ರೂಪಗಳ ಶೋಧ




ಹಲವು ದಶಕಗಳಿಂದ ಬಿಡಿಯಾಗಿ ದೊರೆಯುತ್ತಿದ್ದ ಜಿ.ರಾಜಶೇಖರರ ಬರಹಗಳು ಈ ಪುಸ್ತಕದ ರೂಪದಲ್ಲಿ ಈಗ ಒಟ್ಟಾಗಿ ಸಿಕ್ಕು ಅವರ ಚಿಂತನಾಕ್ರಮವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ. ತಮ್ಮ ವಿಚಾರಗಳನ್ನು ಅಪಾರ ಮುಕ್ತತೆ-ದೃಢವಾದ ನಂಬಿಕೆಯಿಂದ ಮಂಡಿಸಿದರೂ, ಅವು ಅಳಿಸಲಾಗದ ಶಿಲಾಲೇಖಗಳಂತಾಗದೆ ನಿರಂತರ ವಾಗ್ವಾದಕ್ಕೆ ತೆರೆದುಕೊಂಡಿರಬೇಕೆಂಬ ನಂಬಿಕೆ ಅವರಲ್ಲಿ ಕಾಣಿಸುತ್ತದೆ. ನಿಜವಾದ ಚಿಂತಕನಿಗೆ ತನಗೆ ಸರಿಯೆನ್ನಿಸಿದ ವಿಚಾರಗಳನ್ನು ನಿರಂತರವಾಗಿ ಪ್ರತಿಪಾದಿಸುವ ಮುಕ್ತ ಸಾಮಾಜಿಕ ವಾತಾವರಣ ಮುಖ್ಯವೇ ಹೊರತು, ವಿಚಾರಗಳನ್ನು ಅಧಿಕೃತಗೊಳಿಸುವುದು ಮುಖ್ಯವಲ್ಲ. ಇದುವರೆಗೆ, ಅವರ ಲಂಕೇಶ್ ಪತ್ರಿಕೆಯ ಬರಹಗಳು-ಪುಟ್ಟ ಪ್ರತಿಕ್ರಿಯೆಗಳು, ನೀನಾಸಂ-ಕೋಮುಸೌಹಾರ್ದವೇದಿಕೆಯ ಭಾಷಣಗಳಲ್ಲಿ ಪುತ್ತೂರಿನಂಥ ಸಣ್ಣ ಊರಲ್ಲಿ ನಡೆದ ಕೊಲೆ-ದೊಂಬಿಯಂಥ ದೈನಂದಿನ ಘಟನೆಗಳಿಂದ ಶುರು ಮಾಡಿ ಅಮೆರಿಕದ ಸಾಮ್ರಾಜ್ಯಶಾಹಿ ದಬ್ಬಾಳಿಕೆಯವರೆಗೆ ತೀವ್ರ ತಲ್ಲಣದಿಂದ ತಕ್ಷಣ ಮಾಡುತ್ತಿದ್ದ ಪ್ರತಿಕ್ರಿಯೆಗಳಲ್ಲಿ ಸಮಾಜಕ್ಕೆ ಬೇಕಾದ ಚಿಕಿತ್ಸಕ ನೋಟದ ಜರೂರು ಎದ್ದು ಕಾಣುವುದೇ ಹೊರತು ವಿಚಾರಗಳ ಧೂಳೆಬ್ಬಿಸುವ ಸಿದ್ಧಾಂತಿಯ ಸೋಗಾಗಲೀ, ಸರಳವಾಗಿದ್ದನ್ನೂ ಸಮಸ್ಯಾತ್ಮಕಗೊಳಿಸುವ ಅಕೆಡೆಮಿಕ್ ಚಿಂತಕರ ಗಾಳಿ ಗುದ್ದಾಟವಾಗಲೀ ಕಾಣುವುದಿಲ್ಲ. ಹಾಗಾಗಿಯೇ ಇಲ್ಲಿನ ಬರಹಗಳಲ್ಲಿ, ವ್ಯವಸ್ಥೆಯ ಯಜಮಾನಿಕೆ ಹಾಗೂ ಸಿದ್ಧಾಂತಗಳ ನಿರಂಕುಶತೆಯನ್ನು ಎದುರಿಸುತ್ತ ನಮ್ಮ ಕ್ರಿಯೆ-ಆಲೋಚನೆ-ಸಂವೇದನೆಗಳಲ್ಲಿ ಸ್ವಾಯತ್ತತೆಯನ್ನು ಉಳಿಸಿಕೊಳ್ಳಬೇಕೆಂಬ ಕಾಳಜಿ ನಿರಂತರವಾಗಿದೆ.

ಇಲ್ಲಿ ಅಮೆರಿಕದ ರಾಕ್ಷಸ ನೀತಿಯಿಂದಾಗಿ ಜಾಗತಿಕಮಟ್ಟದಲ್ಲಿ ಅಧಿಕೃತವಾಗಿ/ವ್ಯವಸ್ಥಿತವಾಗಿ ಹಬ್ಬುತ್ತಿರುವ ರಾಜಕೀಯ ಹಿಂಸೆ, ದೇಶದೊಳಗೆ ಕೋಮುವಾದಿ ಶಕ್ತಿಗಳಿಂದ ಸಾಮಾನ್ಯವಾಗುತ್ತಿರುವ ಧಾರ್ಮಿಕ ಹಿಂಸೆ ಮತ್ತು ಅದರಿಂದ ಹುಟ್ಟಿದ ಅಸಹನೆ-ದ್ವೇಷಗಳನ್ನು ನಿರುಂಬಳವಾಗಿ ಮುಂದುವರಿಸುತ್ತ ಅವುಗಳಿಗೆ ಪೂರ್ಣ ಸಹಕಾರವನ್ನು ನೀಡುತ್ತಿರುವ ನಾಗರಿಕ ಸಮಾಜದ ಹಿಂಸೆಗಳನ್ನು ವಿರೋಧಿಸುವ ಬರಹಗಳಿವೆ. ಮುಖ್ಯವಾಗಿ, ನಮ್ಮ ಸುತ್ತಮುತ್ತ ಸಾಮಾನ್ಯವಾಗಿ ಕಾಣುವ ಘಟನೆಗಳ, ಆದರೆ ಅವುಗಳ ಸೂಕ್ಷ್ಮ ವಿವರಗಳ ಮೂಲಕವೇ ವಾದವನ್ನು ಬೆಳೆಸುವ ಕ್ರಮವನ್ನು ಮೊದಲೆರಡು ಭಾಗದ ಬರಹಗಳಲ್ಲಿದೆ. ಅದರ ಮುಂದುವರಿಕೆಯಾಗಿಯೇ ರಾಷ್ಟ್ರ, ಧರ್ಮ, ಅಭಿವೃದ್ಧಿ, ವಿಜ್ಞಾನ, ವ್ಯವಸ್ಥೆ, ಪ್ರಭುತ್ವಗಳು ಮನುಷ್ಯ ಬದುಕಿನ ಇರಸ್ತಿಕೆಯನ್ನೇ ಹಿಂಸ್ರವಾಗಿಸಿರುವ, ಅಸಹನೀಯವಾಗಿಸಿರುವ ವಿವರಗಳನ್ನು ಕೊನೆಯ ಭಾಗದ ಹಲವು ಸಾಹಿತ್ಯ ಕೃತಿಗಳ ವಿಶ್ಲೇಷಣೆಯಲ್ಲಿ ಶೋಧಿಸಲಾಗಿದೆ. ಹಾಗೆ ನೋಡಿದರೆ ರಾಜಶೇಖರ್, ಸಮಾಜವನ್ನು ಕದಡುವ ವಿದ್ಯಮಾನಗಳನ್ನು ವಿಶ್ಲೇಷಿಸುವ ಕ್ರಮ ಮತ್ತು ಬಹುಪಾಲು ಅದೇ ಹಿನ್ನೆಲೆಯಾಗಿರುವ ಸಾಹಿತ್ಯ ಕೃತಿಗಳನ್ನು ವಿಶ್ಲೇಷಿಸುವ ಕ್ರಮ ಏಕರೂಪದ್ದೇ ಆಗಿ ಕಂಡರೂ, ಅವರ ರಾಜಕೀಯ-ಸಾಮಾಜಿಕ ನಿಲುವುಗಳು ಕೃತಿವಿಮರ್ಶೆಯ ದೃಷ್ಟಿಯನ್ನು ಊನಗೊಳಿಸಿದಂತಿಲ್ಲ.

ರಾಜಕೀಯ ಹಿಂಸೆ, ಧಾರ್ಮಿಕ ಹಿಂಸೆ ಮತ್ತು ಸಭ್ಯ ಸಮಾಜದ ಸಮ್ಮತಿಯಿಂದ ನಿರಾತಂಕವಾಗಿ ನೆರವೇರುತ್ತಿರುವ ನಾಗರಿಕ ಹಿಂಸೆಯನ್ನು ಪರಿಶೀಲಿಸುವ ಬರಹಗಳು ಇಲ್ಲಿವೆ. ಪ್ರಭುತ್ವಗಳು ಸೃಷ್ಟಿಸುತ್ತಿರುವ ರಾಜಕೀಯ ಹಿಂಸೆಯನ್ನು ಕುರಿತು ತಜ್ಞತೆಯಿಂದ ಬರೆದಿದ್ದರೂ, ಜಿಆರ್‌ರನ್ನು ಆಳವಾಗಿ ಕಾಡುವುದು ನಾಗರಿಕ ಜಗತ್ತಿನ ಸಮ್ಮತಿಯ ಹಿಂಸೆಯೇ. ಪ್ರಭುತ್ವದ ಹಿಂಸೆಯನ್ನು ತಪ್ಪಿಸಿಕೊಳ್ಳಲು ಸಾಮಾಜಿಕ ಕ್ರಿಯೆ-ಸಾಮುದಾಯಿಕ ವಿವೇಕದ ಒಳದಾರಿಗಳಿರುತ್ತವೆ. ಆದರೆ ನಾಗರಿಕ ಜಗತ್ತಿನಲ್ಲಿ ಹಾಸುಹೊಕ್ಕಾಗಿರುವ ಹಿಂಸೆಯ ಒಳಸುಳಿಗಳನ್ನು ನಿವಾರಿಸುವುದು ಅಸಾಧ್ಯವೆಂಬ ಇಂಗಿತ ಇಲ್ಲಿದೆ. ಪುತ್ತೂರಿನ 'ಮುಗ್ಧ ಹುಡುಗಿ'ಯೊಬ್ಬಳನ್ನು ಬಲಾತ್ಕಾರ ಮಾಡಲೆತ್ನಿಸಿ ಕೊಲೆ ಮಾಡಿದ 'ವಿಕೃತ ಕಾಮಿ'ಯೊಬ್ಬನ ಕೃತ್ಯವನ್ನು, ನಿರ್ದಿಷ್ಟ ಧರ್ಮಗಳಿಗೆ ಆರೋಪಿಸಿ, ಎರಡು ಧರ್ಮಗಳ ನಡುವಿನ ದ್ವೇಷದ ಘಟನೆಯೆಂಬಂತೆ ಬಿಂಬಿಸುವ ರಾಜಕೀಯ ಪಕ್ಷಗಳು, ಮಾಧ್ಯಮಗಳು ಮತ್ತು ಅದನ್ನೇ ಸರಾಗವಾಗಿ ನಂಬುವ ನಾಗರಿಕ ಸಮಾಜಗಳೆಲ್ಲವನ್ನೂ ಒಂದೇ ಬೀಸಿನಲ್ಲಿ ತೀಕ್ಷ್ಣ ವಿಮರ್ಶೆಗೆ ಒಳಪಡಿಸುತ್ತಾರೆ. ಅನ್ಯಧರ್ಮೀಯನನ್ನು ಮದುವೆಯಾಗಿದ್ದಕ್ಕೆ ಹೆತ್ತ ಮಗಳನ್ನೇ ಕೊಂದ ತಂದೆ, ಅಣ್ಣ-ತಮ್ಮಂದಿರ ಕೃತ್ಯವನ್ನು 'ಮತಾಂಧ ಕೃತ್ಯ'ವೆಂದು ತೀರ್ಮಾನಿಸಿ, ಅದಕ್ಕೆ ಇಡೀ ಸಮುದಾಯವನ್ನು ಭಾಗೀದಾರನನ್ನಾಗಿಸುವ ಸಮಾಜದ ಅವಿವೇಕವನ್ನು ಕಟುವಾಗಿ ವಿರೋಧಿಸುತ್ತಾರೆ. ದೇಶವಿಭಜನೆಯ ಹತ್ಯಾಕಾಂಡದಲ್ಲಾಗಲೀ, ಗುಜರಾತಿನ ನರಮೇಧದಲ್ಲಾಗಲೀ ಪಾಲ್ಗೊಂಡವರು ಕೊಲೆಗಡುಕರಲ್ಲ, ಕ್ರಿಮಿನಲ್‌ಗಳಲ್ಲ. ಅವರು ಎಲ್ಲರಂತೆ ತಿಂದುಂಡು ಬದುಕುವ ಜನಸಾಮಾನ್ಯರು ಎಂಬ ಗ್ರಹಿಕೆಯೇ ಹಿಂಸೆಯ ಅಗಾಧತೆ ಅಸಹನೀಯತೆಯನ್ನು ಹೆಚ್ಚಾಗಿಸುತ್ತದೆ. ಗುಜರಾತಿನ ಬೆಸ್ಟ್‌ಬೇಕರಿ ಪ್ರಕರಣವನ್ನು ವಿಶ್ಲೇಷಿಸುತ್ತ, ಬೆಸ್ಟ್‌ಬೇಕರಿ ಹತ್ಯಾಕಾಂಡವನ್ನು ಆಗಗೊಳಿಸಿದ ಸಮಾಜದಲ್ಲಿ ಅದಕ್ಕೆ ಕಾರಣರಾದವರ ವಿರುದ್ಧ ನ್ಯಾಯಾಲಯ ತೀರ್ಪುನೀಡುತ್ತದೆಂದು ನಿರೀಕ್ಷಿಸುವುದೇ ಅಸಂಗತವೆನ್ನುತ್ತಾರೆ. ಇಂಥ ಹಿಂಸೆಯ ವಿಕಾರ ಸ್ವರೂಪ ಹಲವು ಬಗೆಗಳಲ್ಲಿ ಹೇಗೆ ಮೈದಳೆದಿದೆ ಎಂಬುದನ್ನು ನಿರ್ವಚಿಸಲು ಮಾಂಟೋ, ಅನಂತಮೂರ್ತಿ, ರಸೆಲ್, ಕಾಫ್ಕಾ, ನೆರೂದ, ಲಂಕೇಶರ ಬರಹಗಳನ್ನು ಚರ್ಚಿಸುತ್ತಾರೆ. ಕಮ್ಯುನಿಸ್ಟ್ ಸಿದ್ಧಾಂತಗಳ ಬಗೆಗಿನ ಮೋಹ ನೆರೂದನನ್ನು ಸ್ಟಾಲಿನ್‌ನ ಹಿಂಸೆಗೆ ಹೇಗೆ ಕುರುಡಾಗಿಸಿತು? ಏಕರೂಪಿ ರಾಷ್ಟ್ರೀಯತೆಯ ಅವಾಂತರಗಳನ್ನು ಟ್ಯಾಗೋರರ 'ಗೋರಾ'ಕೃತಿ ಹೇಗೆ ನಿರ್ವಹಿಸುತ್ತದೆ ಎಂದು ವಿಶ್ಲೇಷಿಸುವಂಥ ಬರಹಗಳನ್ನು ಗಮನಿಸಿದರೆ, ಮತ್ತೆ ಮತ್ತೆ ಜಿಆರ್ ಹಿಂಸೆಯ ಹಲವು ರೂಪಗಳು ಹಾಗೂ ಸಂಕಥನಗಳನ್ನು ಮರುಶೋಧಿಸುವಂತೆ ಕಾಣುತ್ತಾರೆ. ಸಮಾಜದ ಬಗ್ಗೆ ತೀವ್ರ ಕಾಳಜಿಯುಳ್ಳ ಚಿಂತಕನೊಬ್ಬ ಕನಲಿದಂತೆ ಹಿಂಸೆಯ ಬಗ್ಗೆ ಪದೇಪದೇ ಬರೆಯುವುದೇಕೆಂದರೆ, ಅಂಥ ಕಥನಗಳನ್ನು ಕಿವಿಯಿಂದ ಕಿವಿಗೆ, ಹೃದಯದಿಂದ ಹೃದಯಕ್ಕೆ ದಾಟಿಸುತ್ತ ಅವು ನಮ್ಮ ಸಾಕ್ಷಿ ಪ್ರಜ್ಞೆಯಿಂದ ಅಳಿಸಿಹೋಗದಂತೆ ಮಾಡುವ ಕಾರಣಕ್ಕಾಗಿ. ಇಷ್ಟು ಗಂಭೀರ ಸಂಗತಿಗಳ ಚರ್ಚೆಗಳನ್ನೂ ಜಿ.ಆರ್ ಹೈಸ್ಕೂಲು ಫೇಲಾದ ಹುಡುಗನಿಗೂ ಅರ್ಥವಾಗಬೇಕೆಂಬ ಜವಾಬ್ದಾರಿಯಿಂದ ಬರೆಯುವುದು ಅವರ ಸಾಮಾಜಿಕ ಕಳಕಳಿಗೆ ಉದಾಹರಣೆಯಂತಿದೆ.

ಆಧುನಿಕ ಜಗತ್ತಿನಲ್ಲಿ ಪ್ರಭುತ್ವ, ನ್ಯಾಯ ವ್ಯವಸ್ಥೆ, ರಾಷ್ಟ್ರೀಯತೆ, ಬಂಡವಾಳಶಾಹಿ, ಜಾಗತೀಕರಣ, ಅಭಿವೃದ್ಧಿ, ವಿಜ್ಞಾನ, ಅಣುಶಕ್ತಿ-ಎಲ್ಲವುಗಳು ಸಹ ಹಿಂಸೆಯನ್ನು ಅಧಿಕೃತಗೊಳಿಸುವ, ನಿರ್ವಹಿಸುವ ವಿದ್ಯಮಾನಗಳಾಗಿ ಪರಿಣಮಿಸಿವೆ. ಅಲ್ಲದೆ, ಇವೆಲ್ಲವುಗಳು ಹಿಂಸೆಗೆ ನ್ಯಾಯಬದ್ಧವಾದ ಪಾತ್ರವೊಂದನ್ನು ಕಲ್ಪಿಸಿ, ಅದಕ್ಕೆ ಎಲ್ಲಕ್ಕೂ ಅತೀತವಾದ ನೈತಿಕತೆ-ಸಮರ್ಥನೆಯನ್ನು ಸೃಷ್ಟಿಸಿವೆ ಎಂಬುದು ಇಲ್ಲಿನ ಬರಹಗಳಿಂದ ಸ್ಪಷ್ಟವಾಗುತ್ತದೆ. ಅದಕ್ಕೆ ಪರ್ಯಾಯವಾಗಿ ಪ್ರಶ್ನೆ, ಪ್ರತಿಭಟನೆ, ವಾಗ್ವಾದಗಳಿಂದ ಜಾಗೃತವಾದ ಸಮಾಜವೊಂದು ಇರಬೇಕೆಂದು ಜಿಆರ್‌ರ ಹಂಬಲವಾಗಿದೆ. ಅಂಥ ಕ್ರಿಯಾಶೀಲ ಸ್ವಾಯತ್ತ ನಾಗರಿಕ ಸಮಾಜವನ್ನು ರಸೆಲ್‌ನಲ್ಲಿ, ಬಹುವಚನೀಯ ಭಾರತದ ಮಾದರಿಯನ್ನು ಕೆ.ವಿ.ಸುಬ್ಬಣ್ಣನವರಲ್ಲಿ, ಅನಂತಮೂರ್ತಿಯವರ ವಾಗ್ವಾದಗಳಲ್ಲಿ ಕಾಣುತ್ತಾರೆ. ಆದರೆ ಹಿಂಸೆಯ ಸ್ವರೂಪಗಳು- ಅದರ ಪರಮಾಧಿಕಾರವನ್ನು ನಿರ್ವಚಿಸುವಾಗ ಕಾಣುವ ಸೂಕ್ಷ್ಮತೆ, ಅದಕ್ಕಿರುವ ಪರ್ಯಾಯಗಳನ್ನು ಶೋಧಿಸುವಾಗ ಕಾಣಿಸುವುದಿಲ್ಲ. ಅದಕ್ಕಾಗಿಯೇ ಏನೋ 'ಗೋರಾ' ಕೃತಿಯ ಚರ್ಚೆಯಲ್ಲಿ ಆನಂದಮೊಯಿಯ ಪಾತ್ರದ ಮಹತ್ವವನ್ನು, 'ಗುಣಮುಖ'ನಾಟಕದಲ್ಲಿ ಅಲಾವಿ ಖಾನನ ಪಾತ್ರವನ್ನು ಅವರು ಹೆಚ್ಚು ಅಸ್ಥೆಯಿಂದ ಗಮನಿಸಿದಂತಿಲ್ಲ. ಹಾಗಾಗಿಯೇ ಆಧುನಿಕ ಜಗತ್ತಿನ ಎಲ್ಲ ಹಿಂಸೆಯ ವಿಕಾರಗಳನ್ನು ಆತ್ಯಂತಿಕವಾಗಿ ವಿರೋಧಿಸಿದ ಗಾಂಧಿ ಚಿಂತನೆಯ ಪ್ರಸ್ತಾಪಗಳು ಅಲ್ಲಲ್ಲಿ ಬಂದರೂ ಅದನ್ನು ದೊಡ್ಡ ಪರ್ಯಾಯವೆಂಬಂತೆ ಕಾಣುವ ಬರಹಗಳು ಇಲ್ಲಿ ಕಾಣುವುದಿಲ್ಲ. ರೋಗ ಲಕ್ಷಣವನ್ನು ವಿವರಿಸುವಾಗ ತೋರುವ ಕಾಳಜಿ ರೋಗನಿದಾನದ ಸಂದರ್ಭದಲ್ಲಿ ಇಲ್ಲ.

**-ಡಾ. ಎಸ್.ಸಿರಾಜ್ ಅಹಮದ್**

‘ಹೊಸ ಮನುಷ್ಯ’ ಓದುಗರೆಲ್ಲರಿಗೆ

ಹಾರ್ದಿಕ ಶುಭಾಶಯಗಳು



**ಮೆ. ವಿಶ್ವೇಶ್ವರ ಪಾಲಿಮರ್ಸ್**

ಪಾಲುದಾರರು: ಎಂ.ಎಸ್. ನರಗುಂದ

ಮತ್ತು ಶೋಭಾ ನರಗುಂದ

(ಎಚ್.ಡಿ.ಪಿ.ಇ. ಪೈಪುಗಳ ತಯಾರಕರು ಮತ್ತು ಮಾರಾಟಗಾರರು)

ಬೇಲೂರು ಕೈಗಾರಿಕಾ ಕ್ಷೇತ್ರ

ಧಾರವಾಡ

‘ಹೊಸ ಮನುಷ್ಯ’ ಓದುಗರೆಲ್ಲರಿಗೆ

ಹಾರ್ದಿಕ ಶುಭಾಶಯಗಳು



**ಜಾಕೀರ್ ಹುಸೇನ್ ಚ. ಶಿಬಾರಗಟ್ಟಿ**

ಮೊದಲ ದರ್ಜೆ ಸಿವಿಲ್ ಗುತ್ತಿಗೆದಾರರು

ಲಕ್ಷ್ಮಿಸಿಂಗನಕೇರಿ, ನಗರ್‌ಕರ್ ಕಾಲೋನಿ

ಧಾರವಾಡ

'ಹೊಸ ಮನುಷ್ಯ' ಓದುಗರೆಲ್ಲರಿಗೆ

ಯುಗಾದಿಯ ಶುಭಾಶಯಗಳು



**-ಹೋಟೆಲ್ ವಿಶ್ವ ರೆಸಾರ್ಟ್**

ಮಾಲೀಕರು: ನಾರಾಯಣ ಶೆಟ್ಟಿ

ಮತ್ತು ಕುಟುಂಬ

ಮಮ್ಮಿಗಟ್ಟಿ ಗ್ರಾಮ

ಪವರ್‌ಗ್ರಿಡ್ ಎದುರು

ಧಾರವಾಡ ತಾ.

HOSA MANUSHYA, a kannada Socialist monthly solely owned, edited, published and printed by D.S. Nagabhushana, at HIG-5,Kallahally Extn.,Vinoba Nagara, SHIVAMOGGA-577204. Printed at Replica Offset Printers, No.14/1, 1st Main, Industrial Town, Rajaji Nagara, Bengaluru-560 044 Ph: 08023357963

## ತಿಂಗಳ ಸಾಲುಗಳು...



ಧರ್ಮ ಅಂದರೆ ಅದು ತತ್ವಗಳಿಗೆ ಸಂಬಂಧಿಸಿದ ವಿಷಯವಾಗಿರಬೇಕೇ ಹೊರತು ನಿಯಮಗಳಿಗೆ ಸಂಬಂಧಿಸಿದ ವಿಷಯವಾಗಿರಬಾರದು. ಅದು ಒಮ್ಮೆ ನಿಯಮಗಳಿಗೆ ಸಂಬಂಧಿಸಿದ ವಿಷಯವಾಗಿ ಅವನತಿ ಹೊಂದಿತೆಂದರೆ, ಅದು ಯಾವುದೇ ಧರ್ಮದ ಪ್ರಾಣಕ್ಕೆ ಸಮನಾದ ಜವಾಬ್ದಾರಿಯನ್ನು ಕೊಲ್ಲುತ್ತದೆ ಆಗ ಅದು ಧರ್ಮವಾಗಿ ಉಳಿಯುವುದಿಲ್ಲ.

–ಡಾ. ಬಿ.ಆರ್. ಅಂಬೇಡ್ಕರ್

ಪತ್ರಿಕೆಗೆ ಶುಭ ಕೋರುತ್ತಾ...

**-ಸಿ. ಪ್ರಶಾಂತ್**

**ದೀಪಾ**

**ಕು. ಅನಘ**

ಬೆಂಗಳೂರು

**Regd. News Paper** RNI No. KARKAN/2012/47568

Rgd No. KA/SK/SMG-1209/2016-18

ಇವರಿಗೆ \ To

If undelivered, please return to D.S. Nagabhushana, Editor, 'Hosa Manushya', 'HIG-5, 'Nudi', Kallahalli Extension, Vinoba Nagara, Shivamogga -577204( Karnataka)